



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರಿ

ಹೊಂಗನಸು – 73

| ಸಂಪುಟ: ೦೮ ಸಂಚಿಕೆ: ೬ | ಅಕ್ಟೋಬರ್ ೨೦೨೧ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 08 Issue: 6 | October 2021 | Pages - 8 | A. Sub. - Rs. 20/- | Editor : Sri. B.R. Ravindranath |





ಬಿ.ಎಂ.ಶ್ರೀ. ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೪
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ,
೩ನೇ ಮುಖ್ಯರಸ್ತೆ,
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ :೨೬೬೧೫೮೭೭
ಇಮೇಲ್ : bmsritrust@gmail.com
web: www.bmshri.org
ಕಛೇರಿ ಸಮಯ:
ಬೆಳಗ್ಗೆ 10–30ರಿಂದ ಸಂಜೆ 5–00ಗಂಟೆ.
ಭಾನುವಾರ ರಜೆ


೧೨–೯–೨೦೨೧

## ಶ್ರೀಮತಿ ಸಾವಿತ್ರಮ್ಮ –ಪ್ರೊ. ಎಂ. ವಿ. ಸೀ. ಸಾಹಿತ್ಯ ಪುರಸ್ಕಾರ ೨೦೨೧
## ಪ್ರಶಸ್ತಿ ಪುರಸ್ಕೃತರು : ಪ್ರೊ. ಶಿವರಾಮಯ್ಯ



ಕಾರ್ಯಕ್ರಮದ ಆರಂಭದಲ್ಲಿ ಎಂ.ವಿ.ಸೀ ಅವರ "ಎಲೆದೇವ ನಾನೊಂದು ಕಿರು ಸೊಡರು ಮಾತ್ರ" ಕವನವನ್ನು ಶ್ರೀಮತಿ ಮಾನಸ ಅವರು ತಮ್ಮ ಸುಶ್ರಾವ್ಯ ಕಂಠದಿಂದ ಹಾಡಿದರು. ಡಾ. ಹೆಚ್.ಎಸ್.ಎಂ. ಪ್ರಕಾಶ್ ಅವರು ಕಾರ್ಯಕ್ರಮಕ್ಕೆ ಆಗಮಿಸಿದ್ದ ಎಲ್ಲರನ್ನೂ ಸ್ವಾಗತಿಸಿದರು. ತಮ್ಮ ಪ್ರಾಸ್ತಾವಿಕ ನುಡಿಗಳಲ್ಲಿ, ಪ್ರಶಸ್ತಿಯನ್ನು ಎಂ.ವಿ.ಸೀ ಅವರ ಸುಪುತ್ರರಾದ ಶ್ರೀ ಎಂ.ಎಸ್. ಭಾಸ್ಕರ್, ಶ್ರೀ ಎಂ.ಎಸ್. ರಾಮಪ್ರಸಾದ್, ಶ್ರೀ ಎಸ್.ಟಿ. ರಾಧಾಕೃಷ್ಣ ಮತ್ತು ಶ್ರೀ ಎಂ.ಎಸ್. ಶೇಷಾದ್ರಿನಾಥನ್ ಅವರುಗಳು ೨೦೦೨ರಲ್ಲಿ ಪ್ರಾರಂಭಿಸಿದ್ದಾಗಿ ತಿಳಿಸಿದರು. ನಂತರ ಸಮಾರಂಭಕ್ಕೆ ಆಗಮಿಸಿದ್ದ ಗಣ್ಯರ ಪರಿಚಯವನ್ನು ಮಾಡಿ ಸರ್ವರಿಗೂ ಸ್ವಾಗತ ಕೋರಿದರು.

ಅಭಿನಂದನ ನುಡಿಗಳನ್ನಾಡಿದ ಡಾ. ಕೆ.ವೈ.ನಾರಾಯಣ ಸ್ವಾಮಿಯವರು, ಮೈಮನ ಎರಡಕ್ಕೂ ಆರೋಗ್ಯಕರವಾದ ರೀತಿಯಲ್ಲಿ ಬರೆಯುವ ಶೈಲಿ ಮತ್ತು ಕೌಶಲ್ಯವು ಶ್ರೀ ಶಿವರಾಮಯ್ಯ ಅವರಿಗೆ ಕರಗತವಾಗಿದೆ. ಕನ್ನಡ ಸಂಸ್ಕೃತಿಯನ್ನು ಮುಂದಿನ ತಲೆಮಾರಿಗೆ ದಾಟಿಸುತ್ತಿರುವ ಕಾಯಕದಲ್ಲಿ, ಪ್ರಜ್ಞಾ ಪೂರ್ವಕ ಶ್ರದ್ಧೆಯನ್ನು ಅವರ ಎಲ್ಲಾ ಸಾಹಿತ್ಯಿಕ ಕೃತಿಗಳಲ್ಲಿ ಕಾಣಬಹುದೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಇಷ್ಟಲ್ಲದೆ ಅವರು ತಮ್ಮ ಸಮಯವನ್ನು ಜನಪರ ಸಂಘಟನಾ ಕಾರ್ಯಗಳಲ್ಲಿ ವಿನಿಯೋಗಿಸುತ್ತಾ, ಸಕ್ರಿಯ ಹೋರಾಟಗಳಲ್ಲೂ ಭಾಗವಹಿಸುತ್ತಾ, ಯುವಜನತೆಗೆ ಪ್ರೇರಣಾದಾಯಕರಾಗಿದ್ದಾರೆಂದು ತಿಳಿಸಿದರು. ಅವರು ರಚಿಸಿರುವ ಕೆಲವು ಕೃತಿಗಳನ್ನು ಸಂಕ್ಷಿಪ್ತವಾಗಿ ವಿಶ್ಲೇಷಿಸಿದರು.

ಡಾ. ವಿಜಯಾ ಸುಬ್ಬರಾಜ್ ಅವರು ಅಭಿನಂದನ ಪತ್ರವನ್ನು ಸಭೆಯಲ್ಲಿ ಓದಿದರು.

ಪ್ರಶಸ್ತಿ ಪ್ರದಾನ ಮಾಡಿದ ಡಾ. ಸಿದ್ಧರಾಮಯ್ಯನವರು, ಶ್ರೀ ಶಿವರಾಮಯ್ಯನವರು ಬಹಳ ಸಂಕೋಚ ಸ್ವಭಾವದ ವ್ಯಕ್ತಿ. ತಮ್ಮ ಆಸಕ್ತಿಯ ಕ್ಷೇತ್ರಗಳಲ್ಲಿ ಮಹತ್ವದ್ದನ್ನು ಸಾಧಿಸಿದ ಸಾಧಕರಾಗಿದ್ದಾರೆ. ಅವರು ಜನಪದ ಸಂಘಟನೆಗಳಲ್ಲಿ ತೊಡಗಿಸಿಕೊಂಡು ಅನ್ಯಾಯದ ವಿರುದ್ಧ ಹೋರಾಡುವ ಕಾಯಕದಲ್ಲಿ ಈಗಲೂ ಕ್ರಿಯಾಶೀಲರಾಗಿರುವುದನ್ನು ಕಾಣಬಹುದು. ನಿಷ್ಠೆಯಿಂದ ಮತ್ತು ಪ್ರೀತಿಯಿಂದ ಮರಗಳನ್ನು ಬೆಳೆಸುವಲ್ಲಿ ಅಪಾರ ಆಸಕ್ತಿ ಹೊಂದಿರುವ ಶಿವರಾಮಯ್ಯನವರಿಗೆ ಪರಿಸರ ಸಂಬಂಧ ಪ್ರಶಸ್ತಿಗೂ ಆಯ್ಕೆಗೊಳ್ಳುವರೋ ಏನೋ, ಎಂದು ಅವರ ಪರಿಸರ ಕಾಳಜಿಯನ್ನು ಅನಾವರಣ ಮಾಡಿದರು.

ಪುರಸ್ಕಾರ ಸ್ವೀಕರಿಸಿದ ಪ್ರೊ. ಶಿವರಾಮಯ್ಯನವರು, ನಾಡಿನ ಹೆಮ್ಮೆಯ ಸಾಂಸ್ಕೃತಿಕ ಮತ್ತು ವಿದ್ವತ್ ಕೇಂದ್ರವಾದ ಬಿ.ಎಂ.ಶ್ರೀ ಪ್ರತಿಷ್ಠಾನ ನೀಡಿರುವ ಪ್ರಶಸ್ತಿ ಮತ್ತು ಪುರಸ್ಕಾರವು ತಮಗೆ ತುಂಬ ಶ್ರೇಷ್ಠವಾದದ್ದು ಎಂದು ಹೇಳಿ ತಮ್ಮ ಗುರುಗಳಾದ ಹಂಪನಾ ಸಣ್ಣಗುಡ್ಡಯ್ಯ ಮುಂತಾದವರನ್ನು ಸ್ಮರಿಸಿಕೊಂಡು ಇಂದಿನ ಸಮಾರಂಭವು ಗುರು ಕಾಣಿಕೆ ಸಲ್ಲಿಸಲು ಸದಾವಕಾಶ ನೀಡಿತು ಎಂದು ಭಾವುಕರಾಗಿ ನುಡಿದರು. ಪಂಪ ಭಾರತ ಒಂದು ಅಧ್ಯಯನ ಪುಸ್ತಕ ೨೦೧೮ರಲ್ಲಿ ಪ್ರಕಟಣೆಗೊಂಡರೂ, ಅಂದಾಜು ಮೂರು ವರ್ಷಗಳ ಕಾಲ ಅಧ್ಯಯನದಲ್ಲಿ ತೊಡಗುವಂತೆ ಮಾಡಿದ್ದನ್ನು ಸ್ಮರಿಸಿಕೊಂಡರು.

೨ ಪುಟಕ್ಕೆ

## ಸಂಪಾದಕೀಯ

ಕರೋನಾ ವೈರಾಣುವಿನ ಭಯ ಕಡಿಮೆಯಾಗುತ್ತಿದೆ. ಮಾರುಕಟ್ಟೆಗಳು ತೆರೆದಿವೆ. ಸರಕುಗಳ ಮಾರಾಟದ ಗತಿ ಹೆಚ್ಚಿದೆ. ಷೇರು ಮಾರುಕಟ್ಟೆಯಂತೂ ಹಿಂದೆಂದೂ ಕಾಣದ ಮಟ್ಟವನ್ನು ತಲುಪಿದೆ. ಸರ್ಕಾರದ ಬೊಕ್ಕಸಕ್ಕೆ ಹೆಚ್ಚು ಆದಾಯ ಹರಿದು ಬರುತ್ತಿದೆ.

ಬಿಎಂಶ್ರೀ ಪ್ರತಿಷ್ಠಾನ ಒಂದು ಲಾಭೋದ್ದೇಶವಿಲ್ಲದ ಸಂಸ್ಥೆ. ಸರ್ಕಾರದ ಅನುದಾನ ಹಾಗೂ ದಾನಿಗಳು ನೀಡುತ್ತಿರುವ ಹಣದಿಂದ ತನ್ನ ಚಟುವಟಿಕೆಗಳನ್ನು ಇಷ್ಟು ದಿನ ನಡೆಸಿಕೊಂಡು ಬಂದಿದೆ. ಕಳೆದ ಎರಡು ವರ್ಷಗಳಲ್ಲಿ ಸರ್ಕಾರದ ಅನುದಾನ ಬಾರದೆ ಪ್ರತಿಷ್ಠಾನಕ್ಕೆ ಸಂಪನ್ಮೂಲಗಳ ಕೊರತೆಯ ಬಿಸಿ ಹತ್ತತೊಡಗಿದೆ. ಇದೇ ಸರಿಸುಮಾರು ಪರಿಸ್ಥಿತಿಗಳನ್ನು ಬಹುತೇಕ ಎಲ್ಲ ಸಾಂಸ್ಕೃತಿಕ ಸಂಸ್ಥೆಗಳೂ ಎದುರಿಸುತ್ತಿವೆ.

ಕರೋನಾದ ದೆಸೆಯಿಂದ ಕೆಲವು ರೀತಿಯ ಹೊಸ ಪ್ರಯೋಗಗಳು ಯಶಸ್ವಿಯಾಗಿವೆ. ಬಹುತೇಕ ಸಂಸ್ಥೆಗಳು ಉಪನ್ಯಾಸ ಕಾರ್ಯಕ್ರಮಗಳನ್ನು ಜಾಲತಾಣಗಳ ಮೂಲಕ ನಡೆಸುತ್ತಿವೆ. ಆದರೆ ಸಭೆಯಲ್ಲಿ ಹಾಜರಿದ್ದು ಕೇಳಿದ ಉಪನ್ಯಾಸಗಳು ಹೆಚ್ಚು ಪರಿಣಾಮಕಾರಿಯಾಗಿರುತ್ತವೆ ಎಂಬುದರಲ್ಲಿ ಸಂದೇಹವಿಲ್ಲ. ಸಭೆಗಳನ್ನು ಸಂಘಟಿಸುವ ಕೆಲಸ ಕಷ್ಟವಾದರೂ ಸಭೆಗೆ ಖುದ್ದಾಗಿ ಬಂದು ಕಾರ್ಯಕ್ರಮಗಳಲ್ಲಿ ಭಾಗವಹಿಸುವುದು ಹೆಚ್ಚು ಪ್ರಿಯವಾಗಿರುತ್ತದೆ

ಈ ವರ್ಷ ಕರ್ನಾಟಕ ಸರ್ಕಾರವು ನಮ್ಮಂತಹ ಸಂಸ್ಥೆಗಳಿಗೆ ಅನುದಾನಗಳನ್ನು ನೀಡುವ ಪದ್ಧತಿಯನ್ನು ಪುನಃ ಪ್ರಾರಂಭಿಸುತ್ತದೆ ಎಂದು ಆಶಿಸೋಣ. ಹಾಗೆಯೇ ಕನ್ನಡಾಭಿಮಾನಿಗಳು ಸಾಂಸ್ಕೃತಿಕ ಸಂಸ್ಥೆಗಳಿಗೆ ಉದಾರವಾಗಿ ಧನಸಹಾಯ ಮಾಡುತ್ತಾರೆಂದು ನಂಬೋಣ.

– ಬಿ.ಆರ್. ರವೀಂದ್ರನಾಥ

೧ ಪುಟದಿಂದ

ವಿಕ್ರಮಾರ್ಜುನ ವಿಜಯ ರಚಿಸಿದ ಪಂಪನ ನಾಗರಿಕ ಪ್ರಜ್ಞೆಯನ್ನು ತಾವು ಬಹಳವಾಗಿ ಮೆಚ್ಚಿಕೊಂಡಿದ್ದನ್ನು ತಿಳಿಸಿ ತಾವು ಬದುಕಿರುವುದೆ ಓದುವುದಕ್ಕೆ ಮತ್ತು ಬರೆಯುವುದಕ್ಕೆ ಎಂದು ಹೇಳಿ ತಮ್ಮ ಇಲ್ಲಿಯವರೆಗಿನ ಪಯಣದಲ್ಲಿ ಸಾಹಿತ್ಯಿಕ, ಸಾಂಸ್ಕೃತಿಕ, ಸಾಮಾಜಿಕ ಕೊಂಡಿಗಳನ್ನು ನೆನಪಿಸಿಕೊಂಡರು.

ಡಾ. ಲಕ್ಷ್ಮೀನಾರಾಯಣ ಅವರು, ಎಂ.ವಿ.ಸೀ. ಸಾಹಿತ್ಯ ಪುರಸ್ಕಾರವನ್ನು ಒಂದುವರ್ಷ ಸಂಶೋಧಕರಿಗೆ, ಒಂದು ವರ್ಷ ನಾಡು–ನುಡಿಕುರಿತ ಸಂಸ್ಥೆ ಸಂಘಟನೆಯ ಕ್ಷೇತ್ರದಲ್ಲಿ ಕೆಲಸಮಾಡಿದವರಿಗೆ ಹಾಗೂ ಮತ್ತೊಂದು ವರ್ಷ ಸೃಜನಶೀಲ ಸಾಹಿತ್ಯ, ಮತ್ತು ವಿದ್ವತ್ತಿನ ಕ್ಷೇತ್ರದಲ್ಲಿನ ಸಾಧಕರಿಗೆ ನೀಡುವ ವ್ಯವಸ್ಥೆಯನ್ನು ಪ್ರತಿಷ್ಠಾನ ಪಾಲಿಸಿಕೊಂಡು ಬರುತ್ತಿರುವುದಾಗಿ ತಿಳಿಸಿದರು. ಶ್ರೇಷ್ಠಕವಿಗಳು, ನಾಟಕಕಾರರು, ಆಡಳಿತದಲ್ಲಿ ಕನ್ನಡವನ್ನು ವ್ಯಾಪಕವಾಗಿ ಬಳಸಬೇಕೆಂದು ಹೇಳಿದರು. ಕನ್ನಡ ಕಟ್ಟುವ ಕಾಯಕದಲ್ಲಿ ಒಳ್ಳೆಯ ಕೆಲಸ ಮಾಡಿದ ಕ್ರಿಯಾಶೀಲ ಅಧ್ಯಕ್ಷರು ಮತ್ತು ಶ್ರೀ ಶಿವರಾಮಯ್ಯನವರಿಗೆ ಬಹಳ ಆಪ್ತರಾದ ಪ್ರೊ. ಎಸ್.ಜಿ. ಸಿದ್ಧರಾಮಯ್ಯನವರು ಪ್ರಶಸ್ತಿ ಪ್ರದಾನ ಮಾಡಲು ಆಗಮಿಸಿರುವುದು ತುಂಬ ಸಂತಸದ ಸಂಗತಿ. ಶಿವರಾಮಯ್ಯನವರ ಸಾಹಿತ್ಯ ಸೇವೆಯನ್ನು ಗುರುತಿಸಿ ಅವರು ಯಾವ ಪ್ರಶಸ್ತಿಯ ಹಿಂದೆಯೂ ಹೋದವರಲ್ಲ. ಅದರ ಬಗ್ಗೆ ತಲೆಕೆಡಿಸಿ ಕೊಂಡವರೂ ಅಲ್ಲ ಎಂದು ಶ್ಲಾಘಿಸಿದರು. ಡಾ. ಬಿ.ಸಿ.ರಾಜ್‌ಕುಮಾರ್ ಅವರು ಕಾರ್ಯಕ್ರಮವನ್ನು ನಿರೂಪಿಸಿ, ಕೊನೆಯಲ್ಲಿ ಎಲ್ಲರಿಗೂ ವಂದನೆಗಳನ್ನು ಸಲ್ಲಿಸಿದರು.

### ಕಿರುಪರಿಚಯ

## ಡಾ.ಬಿ. ಎಸ್. ಶೈಲಜ



ಡಾ. ಬಿಎಸ್ ಶೈಲಜಾ ಅವರು 'ಬೆಂಗಳೂರಿನ ಜವಾಹರಲಾಲ್ ನೆಹರೂ ತಾರಾವೀಕ್ಷಣಾಲಯದ ನಿರ್ದೇಶಕಿಯಾಗಿ ನಿವೃತ್ತರಾಗಿದ್ದಾರೆ. ಇವರು ಭೌತಶಾಸ್ತ್ರದಲ್ಲಿ ಎಮ್. ಎಸ್ಸಿ. ಪದವಿ ಪಡೆದು ಭಾರತೀಯ ಖಭೌತ ಸಂಸ್ಥೆಯಿಂದ ಪಿ.ಎಚ್ ಡಿ. ಪಡೆದಿದ್ದಾರೆ. ಇವರು ನಿಯತಕಾಲಿಕೆಗಳಲ್ಲಿ ೧೨೦ ಪ್ರಕಟಣೆಗಳನ್ನು ಹಾಗೂ ೧೭ ಪುಸ್ತಕಗಳನ್ನು ರಚಿಸಿದ್ದಾರೆ. ಇವರು ಸದ್ಯ ಶಿಲಾ ಶಾಸನಗಳು, ೧೭ನೇ ಶತಮಾನದ ಹಸ್ತಪ್ರತಿಗಳ ಅನುವಾದ ಮತ್ತು ವಿಶ್ಲೇಷಣೆ, ದೇವಾಲಯಗಳ ಖಗೋಳೀಯ ಅಂಶಗಳು, ಸ್ಮಾರಕಗಳು ಮತ್ತು ಕಲಾಕೃತಿಗಳು ಈ ವಿಷಯಗಳ ಅಧ್ಯಯನ ನಡೆಸುತ್ತಿದ್ದಾರೆ.

### ಶ್ರದ್ಧಾಂಜಲಿ — ಶ್ರೀಮತಿ ಬಿ.ಜಿ.ಕುಸುಮಾ



ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ಎರಡು ಪ್ರತ್ಯೇಕ ದತ್ತಿಗಳನ್ನು ಸ್ಥಾಪಿಸಿರುವ ನಿವೃತ್ತ ಶಿಕ್ಷಕಿ ಬಿ.ಜಿ.ಕುಸುಮಾ (೮೯) ಅವರು ನಿಧನರಾಗಿದ್ದಾರೆ. ಕುಸುಮಾ ಅವರ ಇಚ್ಛೆಯಂತೆ ನೇತ್ರದಾನ ಮತ್ತು ದೇಹದಾನ ಮಾಡಲಾಗಿದೆ. ವಿಜ್ಞಾನ ಮತ್ತು ಮಕ್ಕಳ ಸಾಹಿತ್ಯದಲ್ಲಿ ಗುರುತಿಸಿಕೊಂಡಿದ್ದ ಅವರು, ಶಾಲಾ ವಿದ್ಯಾರ್ಥಿಗಳಿಗೆ 'ಬೇಸಿಗೆ ವಿಜ್ಞಾನ ಶಿಬಿರ' ಹಮ್ಮಿಕೊಳ್ಳುತ್ತಿದ್ದರು. ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು.

### ಶ್ರದ್ಧಾಂಜಲಿ

## ಡಾ. ಉಪ್ಪಂಗಳ ರಾಮಭಟ್ಟ



ಹಿರಿಯ ಸಾಹಿತಿ ಹಾಗೂ ವಿದ್ವಾಂಸ ಡಾ.ಉಪ್ಪಂಗಳ ರಾಮ ಭಟ್ಟ (೮೧) ನಿಧನರಾಗಿದ್ದಾರೆ.

ಎಂ.ಜಿ.ಎಂ. ಕಾಲೇಜಿನ ನಿವೃತ್ತ ಕನ್ನಡ ಪ್ರಾಧ್ಯಾಪಕರಾಗಿದ್ದ ಡಾ.ಉಪ್ಪಂಗಳ ರಾಮಭಟ್ಟರು ಶ್ರೇಷ್ಠ ವ್ಯಾಕರಣ ವಿದ್ವಾಂಸರಾಗಿದ್ದರು. ೧೯೮೬ರಲ್ಲಿ ಅಕಲಂಕ ಪ್ರತಿಷ್ಠಾನ ಸ್ಥಾಪಿಸಿ ಹಲವು ಕೃತಿಗಳನ್ನು ಹೊರತಂದಿದ್ದರು. ಶ್ರೇಷ್ಠ ಕೃತಿಗಳನ್ನು ಗುರುತಿಸಿ ಪ್ರತಿವರ್ಷ 'ಅಕಲಂಕ ಪ್ರಶಸ್ತಿ' ನೀಡಿ ಗೌರವಿಸುತ್ತಾ ಬಂದಿದ್ದರು. ಉಪ್ಪಂಗಳ ಅವರ ಸಾಹಿತ್ಯ ಕೃಷಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತಿನ ಡಾ.ಹಾ.ಮಾ.ನಾ ದತ್ತಿ ಪ್ರಶಸ್ತಿ, ಅತ್ತಿಮಬ್ಬೆ ಪ್ರತಿಷ್ಠಾನದ ರನ್ನ ಸಾಹಿತ್ಯ ಪ್ರಶಸ್ತಿ, ಕಡೆಂಗೋಡ್ಲು ಕಾವ್ಯ ಪ್ರಶಸ್ತಿಗಳು ಸಂದಿವೆ. ಪ್ರತಿಷ್ಠಾನವು ಇವರ ಭಟ್ಟಾಕಳಂಕನ ಶಬ್ದಾನುಶಾಸನದ ತೌಲನಿಕ ಅಧ್ಯಯನ ಕುರಿತ ನಿಬಂಧವನ್ನು ಪ್ರಕಟಿಸಿದೆ. ಇವರು ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ಡಾ. ಉಪ್ಪಂಗಳ ರಾಮಭಟ್ಟ ಎಂಬ ಹೆಸರಿನಲ್ಲಿ ೨೦೧೬ರಲ್ಲಿ ದತ್ತಿ ಸ್ಥಾಪನೆ ಮಾಡಿದ್ದಾರೆ. ಪ್ರತಿವರ್ಷವೂ ದತ್ತಿ ಕಾರ್ಯಕ್ರಮವನ್ನು ನಡೆಸಲಾಗುತ್ತದೆ.

# ಅಕ್ಟೋಬರ್ ೨೦೨೧ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

ದಿನಾಂಕ : ೧೨ -೧೦-೨೦೨೧ ಮಂಗಳವಾರ ಸಂಜೆ : ೪-೩೦ ಗಂಟೆಗೆ ಜಾಲತಾಣ (ಆನ್ಲೈನ್) ಕಾರ್ಯಕ್ರಮ

**ಎಂ. ಎ. ರಾಮಾನುಜಯ್ಯಂಗಾರ್ ದತ್ತಿ ಕಾರ್ಯಕ್ರಮ**

ವಿಷಯ: ಕನ್ನಡಕ್ಕೆ ದಿನಕರ ದೇಸಾಯಿ ಅವರ ಕೊಡುಗೆ

ಉಪನ್ಯಾಸಕರು: ಪ್ರೊ. ಶಾಂತರಾಜು, ಪ್ರಾಧ್ಯಾಪಕರು, ವಿಜಯ ಸಂಜೆ ಕಾಲೇಜು

ದಿನಾಂಕ : ೨೪-೧೦-೨೦೨೧. ಭಾನುವಾರ ಬೆಳಿಗ್ಗೆ ೧೦-೩೦ ಜಾಲತಾಣ(ಆನ್ಲೈನ್) ಕಾರ್ಯಕ್ರಮ

**ಬೇಟೆರಾಯ ದೀಕ್ಷಿತ್, ಬಿ. ರಾಮಸ್ವಾಮಿ, ಎಸ್. ಶ್ರೀಕಂಠಯ್ಯ, ಶ್ರೀಮತಿ ಸಾವಿತ್ರಮ್ಮರಾಮಸ್ವಾಮಿ ದತ್ತಿ ಕಾರ್ಯಕ್ರಮ**

ವಿಷಯ : 'ಗಣಿತಗನ್ನಡಿ'- ವಿಚಾರ ಸಂಕಿರಣ

ಭಾಗವಹಿಸುವವರು :

ಡಾ. ಬಿ. ಎಸ್. ಶೈಲಜಾ, ಪ್ರೊ. ಬಾಲಚಂದ್ರರಾವ್ ಮತ್ತು ಶ್ರೀ ಸೀತಾರಾಮ ಜಾವಗಲ್.

ದಿನಾಂಕ : ೩೧-೧೦-೨೦೨೧ ಭಾನುವಾರ ಬೆಳಿಗ್ಗೆ : ೧೦-೩೦ ಗಂಟೆಗೆ

ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿ.ಎಂ.ಶ್ರೀ ಪ್ರತಿಷ್ಠಾನ

**ಶಾ. ಬಾಲೂರಾವ್ ಯುವಬರಹಗಾರ ಪ್ರಶಸ್ತಿ ಮತ್ತು ಶಾ. ಬಾಲೂರಾವ್ ಅನುವಾದ ಪ್ರಶಸ್ತಿ ಸಮಾರಂಭ**

ಪ್ರಶಸ್ತಿ ಪ್ರದಾನ : ಡಾ. ಜಿ. ಎನ್ ರಂಗನಾಥರಾವ್,

ಯುವ ಬರಹಗಾರ ಪ್ರಶಸ್ತಿ ಪುರಸ್ಕೃತರು : ಶ್ರೀ ಹರೀಶ ಹಾಗಲವಾಡಿ

ಅನುವಾದ ಪ್ರಶಸ್ತಿ ಪುರಸ್ಕೃತರು : ಡಾ. ಪದ್ಮರಾಜ ದಂಡಾವತಿ

**ಪರಿಚಯ**

### ಶ್ರೀ ಹರೀಶ ಹಾಗಲವಾಡಿ



ಜನನ: ೧೯೮೮. ಮೊದಲಿಗೆ ಓದಿದ್ದು ವಿಜ್ಞಾನವಾದರೂ ನಂತರ ವಿಜ್ಞಾನ ಶಿಕ್ಷಣವನ್ನು ಬಿಟ್ಟು ಸಂಸ್ಕೃತ ಭಾಷೆ ಮತ್ತು ಭಾರತೀಯ ಶಾಸ್ತ್ರಪರಂಪರೆಗಳ ಅಧ್ಯಯನ ಮಾಡಿ ಪ್ರಸ್ತುತ ಸಂಸ್ಕೃತ ಅಧ್ಯಾಪಕರಾಗಿ, ಭಾರತೀಯ ಸಂಸ್ಕೃತಿಯ ಸಂಶೋಧಕ ವಿದ್ಯಾರ್ಥಿಯಾಗಿ ಬೆಂಗಳೂರಿನಲ್ಲಿ ವಾಸವಾಗಿದ್ದಾರೆ. ಸಾಹಿತ್ಯದಲ್ಲೂ ಆಸಕ್ತಿ ಹೊಂದಿರುವ ಶ್ರೀಯುತರು ಎರಡು ಕಾದಂಬರಿಗಳನ್ನು ರಚಿಸಿದ್ದಾರೆ. ಜೊತೆ-ಗೆ ಅನುವಾದ, ಸಂಶೋಧನ ಲೇಖನ, ಚಲನಚಿತ್ರಗಳಿಗೆ ಸಂಭಾಷಣೆ ಬರೆಯುವುದು ಇತ್ಯಾದಿಗಳಲ್ಲಿ ತೊಡಗಿಸಿಕೊಂಡಿದ್ದಾರೆ.

**ಪರಿಚಯ**

### ಪ್ರೊ. ಬಾಲಚಂದ್ರರಾವ್ ಎಸ್

ಮೂಲತಃ ಗಣಿತ ಶಿಕ್ಷಕರಾದ ಪ್ರೊ ಬಾಲಚಂದ್ರ ರಾವ್, ಭಾರತೀಯ ಪರಂಪರೆಯಲ್ಲಿನ ಗಣಿತವನ್ನು ಆಳವಾಗಿ ಅಧ್ಯಯನ ಮಾಡಿದ್ದಾರೆ. ಆ ಕುರಿತಾಗಿ ಹತ್ತಾರು ಪುಸ್ತಕಗಳನ್ನು ರಚಿಸಿದ್ದಾರೆ. 'ಆರ್ಯಭಟೀಯಂ' ಕೃತಿಯನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ, ಭಾರತೀಯ ಗಣಿತದ ಬಗೆಗೆ ವ್ಯಾಪಕವಾದ ಅಧ್ಯಯನ ನಡೆಸಿದ್ದಾರೆ. ಅನೇಕ ಸಂಶೋಧನಾ ಕೃತಿಗಳನ್ನು ಪ್ರಕಟಿಸಿದ್ದಾರೆ. ನ್ಯಾಷನಲ್ ಕಾಲೇಜಿನಲ್ಲಿ ಗಣಿತ ಪ್ರಾಧ್ಯಾಪಕರೂ ಪ್ರಿನ್ಸಿಪಾಲರೂ ಆಗಿದ್ದ ಬಾಲಚಂದ್ರರಾವ್, ಭಾರತೀಯ ವಿದ್ಯಾ ಭವನದ ಗಾಂಧೀ ಕೇಂದ್ರದ ನಿರ್ದೇಶಕರೂ ಆಗಿ ಸೇವೆಯನ್ನು ಸಲ್ಲಿಸಿದ್ದಾರೆ.

**ಪರಿಚಯ**

### ಡಾ. ಪದ್ಮರಾಜ ದಂಡಾವತಿ



ಜನನ : ೧೯೫೫. ವಿಜಯಪುರ ಜಿಲ್ಲೆಯ ಮುದ್ದೇಬಿಹಾಳದವರು. ಕನ್ನಡ ಸ್ನಾತ-ಕೋತ್ತರ ಪದವಿಧರರು.

ಪ್ರಜಾವಾಣಿಯಲ್ಲಿ ೧೯೮೨ ರಲ್ಲಿ ವರದಿಗಾರ / ಉಪ ಸಂಪಾದಕರಾಗಿ ಸೇರಿ ಆ ಸಂಸ್ಥೆಯ ಅತ್ಯುನ್ನತ ಹುದ್ದೆಯಾದ ಸಹ-ಸಂಪಾದಕ ಹಾಗೂ ಕಾರ್ಯ ನಿರ್ವಾಹಕ ಸಂಪಾದಕ ಹುದ್ದೆಗೆ ಏರಿದರು. ಎಂಟು ವರ್ಷಗಳ ಕಾಲ ನಿರಂತರವಾಗಿ ಪ್ರಕಟವಾದ 'ನಾಲ್ಕನೇ ಆಯಾಮ' ಎಂಬ ಅಂಕಣದಿಂದ ಜನಪ್ರಿಯರಾಗಿದ್ದಾರೆ.

ಅವರ ಹನ್ನೊಂದು ಕೃತಿಗಳು ಮತ್ತು ಮೂರು ಸಂಪಾದಿತ ಕೃತಿಗಳು ಪ್ರಕಟಗೊಂಡಿವೆ.

ಪುರಸ್ಕಾರಗಳು : ಅಮೆರಿಕ ಸರ್ಕಾರದ ಅಂತರ ರಾಷ್ಟ್ರೀಯ ಸಂದರ್ಶಕರ ನಾಯಕತ್ವ ಶಿಬಿರಕ್ಕೆ ಆಯ್ಕೆಯಾದ ಪ್ರಜಾವಾಣಿಯ ಮೊದಲ ಪತ್ರಕರ್ತ. ಇಟಲಿಯಲ್ಲಿ ನಡೆದ ಜಿ-೫ ಮತ್ತು ಜಿ-೮ ರಾಷ್ಟ್ರಗಳ ಶೃಂಗ ಸಮ್ಮೇಳನದಲ್ಲಿ ಭಾಗವಹಿಸಿದ್ದ ಭಾರತದ ಪ್ರಧಾನಿ ಡಾ.ಮನಮೋಹನ ಸಿಂಗ್ ಅವರ ಜೊತೆಗಿನ ಮಾಧ್ಯಮದ ನಿಯೋಗದಲ್ಲಿ ಪಾಲುಗೊಂಡಿದ್ದರು.

ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ಮಾಧ್ಯಮ ಅಕಾಡೆಮಿಯ ಜೀವಮಾನ ಸಾಧನೆ ಪ್ರಶಸ್ತಿಗಳು. ಖಾದ್ರಿ ಶಾಮಣ್ಣ ಪತ್ರಿಕೋದ್ಯಮ ಪ್ರಶಸ್ತಿ ಸೇರಿದಂತೆ ಹತ್ತಾರು ಪ್ರಶಸ್ತಿಗಳು ಅವರ ಮುಡಿಗೆ ಏರಿವೆ. ಕರ್ನಾಟಕ ವಿಶ್ವವಿದ್ಯಾಲಯದ ಗೌರವ ಡಾಕ್ಟ-ರೇಟ್ ಪದವಿಗೂ ಅವರು ಭಾಜನರಾಗಿದ್ದಾರೆ. ಹತ್ತಾರು ದೇಶಗಳಲ್ಲಿ ಪ್ರವಾಸ ಮಾಡಿದ್ದಾರೆ. ಶ್ರೀಯುತರು ಕರ್ನಾಟಕ ಮಾಧ್ಯಮ ಅಕಾಡೆಮಿ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದಾರೆ.

# ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ನಡೆದ ಕಾರ್ಯಕ್ರಮಗಳ ವರದಿ

೩೧-೦೮-೨೦೨೧

ಎ. ಸುಬ್ಬಯ್ಯ ಹೆಗಡೆ ಶಾಸ್ತ್ರೀ-ಎಂ. ಕೆ. ವಿಜಯಲಕ್ಷ್ಮಿ-ಎನ್. ಅನಂತರಂಗಾಚಾರ್-ಅನಂತರಂಗ ಪ್ರತಿಷ್ಠಾನ ದತ್ತಿ ಉಪನ್ಯಾಸ ಜಾಲತಾಣ ಕಾರ್ಯಕ್ರಮ

**ಮರೆಯಬಾರದ ಸಾಹಿತಿ ಶ್ರೇಷ್ಠರು ಮಾಲಿಕೆ**

**ವಿಷಯ : ಕನ್ನಡಕ್ಕೆ ಶ್ರೀ ಎಂ.ಆರ್. ಶ್ರೀನಿವಾಸಮೂರ್ತಿ ಅವರ ಕೊಡುಗೆ**

**ಉಪನ್ಯಾಸಕರು : ಡಾ. ಎಸ್.ಎಲ್. ಶ್ರೀನಿವಾಸಮೂರ್ತಿ**




ಶಿಕ್ಷಣ ವೀರಶೈವ ಸಾಹಿತ್ಯ, ನಾಟಕ ಸಾಹಿತ್ಯ, ಮುಂತಾದ ಕ್ಷೇತ್ರಗಳಲ್ಲಿ ಸಲ್ಲಿಸಿರುವ ಅಪರೂಪದ ಸಾಧನೆಗಳಿಂದಾಗಿ ಎಂ.ಆರ್. ಶ್ರೀನಿವಾಸ ಮೂರ್ತಿಯವರು ಇಂದಿಗೂ ಪ್ರಸ್ತುತರಾಗಿದ್ದಾರೆ ಎಂದು ಜಯನಗರ ವಿಜಯ ವಿಭಜಿತ ಪದವಿ ಪೂರ್ವ ಕಾಲೇಜಿನ ಕನ್ನಡ ವಿಭಾಗದ ಮುಖ್ಯಸ್ಥರಾದ ಡಾ. ಎಸ್.ಎಲ್. ಶ್ರೀನಿವಾಸಮೂರ್ತಿಯವರು ಅಭಿಪ್ರಾಯ ಪಟ್ಟರು

ಅವರು ಪ್ರತಿಷ್ಠಾನದ ವತಿಯಿಂದ ಏರ್ಪಡಿಸಲಾಗಿದ್ದ ಎ. ಸುಬ್ಬಯ್ಯ ಹೆಗಡೆ ಶಾಸ್ತ್ರೀ-ಎಂ. ಕೆ. ವಿಜಯಲಕ್ಷ್ಮಿ-ಎನ್. ಅನಂತರಂಗಾಚಾರ್-ಅನಂತರಂಗ ಪ್ರತಿಷ್ಠಾನ ದತ್ತಿಗಳ ವತಿಯಿಂದ ಆಯೋಜಿಸಿದ್ದ "ಮರೆಯ ಬಾರದ ಸಾಹಿತಿ ಶ್ರೇಷ್ಠರು" ಮಾಲಿಕೆಯಲ್ಲಿ 'ಕನ್ನಡಕ್ಕೆ ಎಂ.ಆರ್. ಶ್ರೀನಿವಾಸ ಮೂರ್ತಿಗಳ ಕೊಡುಗೆ' ಎಂಬ ವಿಷಯವನ್ನು ಕುರಿತು ಉಪನ್ಯಾಸ ನೀಡಿದರು.

ಮತೀಯ ಅಧ್ಯಯನದ ಚೌಕಟ್ಟಿನಿಂದ ವಚನ ಸಾಹಿತ್ಯವನ್ನು ಹೊರತಂದು ಅದರ ಸಾಹಿತ್ಯಿಕ ಸೌಂದರ್ಯವನ್ನು ಕನ್ನಡ ವಾಚಕ ಲೋಕಕ್ಕೆ ಪರಿಚಯಿಸಿದ ಹಿರಿಮೆ ಎಂ.ಆರ್. ಶ್ರೀ ಅವರದು. ಪ್ರಭುಲಿಂಗ ಲೀಲೆಯ ಸಂಪಾದನೆ, ಶೂನ್ಯ ಸಂಪಾದನೆಯಲ್ಲಿ ಅವರು ತೋರಿರುವ ಪಾಂಡಿತ್ಯ, ಶಾಸ್ತ್ರನಿಷ್ಠೆಗಳು ಅನುಕರಣೀಯ. ಅವರ 'ರಂಗಣ್ಣನ ಕನಸಿನ ದಿನಗಳು' ಹಾಗೂ 'ರೂಲ್ಸ್ ಮೇಷ್ಟು' ಕೃತಿಗಳು ಶಿಕ್ಷಣ ಕ್ಷೇತ್ರದ ಪರಿವರ್ತನೆಯ ಪರ್ವದ ಚಿತ್ರಣವನ್ನು ನೀಡುತ್ತವೆಯಲ್ಲದೆ ಕರ್ನಾಟಕಗಳಲ್ಲಿ ಶಿಕ್ಷಣದ ಪ್ರಗತಿಯನ್ನು ಕುರಿತ ಸಂಶೋಧನೆಗೆ ಆಕರ ಸಾಮಗ್ರಿಯೂ ಆಗಬಲ್ಲವಾಗಿವೆ ಎಂದು ಅವರು ತಿಳಿಸಿದರು.

ಉಪನ್ಯಾಸದ ನಂತರ ನಡೆದ ಚರ್ಚೆಯಲ್ಲಿ ಪ್ರೊ. ಎಂ.ಆರ್. ನಾಗರಾಜು, ಡಾ.ಆರ್. ಲಕ್ಷ್ಮೀನಾರಾಯಣ ಮುಂತಾದವರು ಭಾಗವಹಿಸಿದರು. ಡಾ. ಆರ್. ಲಕ್ಷ್ಮೀನಾರಾಯಣ ಅವರು ಎಲ್ಲರನ್ನೂ ಸ್ವಾಗತಿಸಿ ಅತಿಥಿಗಳನ್ನು ಸಭೆಗೆ ಪರಿಚಯಿಸಿದರು. ಡಾ. ಬಿ.ಸಿ. ರಾಜಕುಮಾರ್ ಕಾರ್ಯಕ್ರಮವನ್ನು ನಿರ್ವಹಿಸಿದರು.

೧೭.೦೯.೨೦೨೧

## ಡಾ.ಕೆ.ರಾಜೇಶ್ವರಿ ದೊಡ್ಡ ರಂಗೇಗೌಡರ ಸ್ಮಾರಕ ದತ್ತಿ ಉಪನ್ಯಾಸ ಕಾರ್ಯಕ್ರಮ



ಪ್ರಾರಂಭದಲ್ಲಿ ಡಾ. ಬಿ.ಸಿ.ರಾಜಕುಮಾರ್ ಅವರು ಎಲ್ಲರಿಗೂ ಸ್ವಾಗತ ಕೋರಿದರು. ಪ್ರತಿ ವರ್ಷ ನಡೆಯುವ ಡಾ. ಕೆ. ರಾಜೇಶ್ವರಿಗೌಡ ಅವರ ದತ್ತಿ ಉಪನ್ಯಾಸದ ಅಂಗವಾಗಿ ಅವರ ಸಾಹಿತ್ಯ ಕೃತಿಯೊಂದನ್ನು ಕುರಿತ ಉಪನ್ಯಾಸವನ್ನು ನಡೆಸಲಾಗುತ್ತಿದ್ದು ಇಂದು ಅವರ ೯ ಕಥೆಗಳನ್ನು ಒಳಗೊಂಡ "ನಿರ್ಣಯ" ಕಥಾ ಸಂಕಲನವನ್ನು ಕುರಿತು ಅವರ ಸಹೋದ್ಯೋಗಿಯಾಗಿದ್ದ ಬಿಎಂಎಸ್ ಕಾಲೇಜಿನ ಸಹ ಪ್ರಾಧ್ಯಾಪಕಿ ಡಾ. ಶೀಲಾದೇವಿ ಮಳೀಮಠ್ ಅವರು ಉಪನ್ಯಾಸವನ್ನು ನೀಡಿದರು. ಸಹೋದ್ಯೋಗಿಯಾಗಿದ್ದ ಅವಧಿಯ ನೆನಪುಗಳನ್ನು ಹಂಚಿಕೊಂಡ ಅವರು ತಮ್ಮ ಮೇಲೆ ಅವರು ಬೀರಿದ ಪ್ರಭಾವವನ್ನು ವಿವರಿಸಿದರು. ಅವರ ಒಂಬತ್ತು ಕಥೆಗಳ ವಸ್ತು, ಆಶಯ ಹಾಗೂ ಭಾಷಾ ಶೈಲಿಯ ಬಗ್ಗೆ ವಿಶ್ಲೇಷಣಪೂರ್ವಕವಾದ ಉಪನ್ಯಾಸವನ್ನು ನೀಡಿದರು. ಡಾ. ದೊಡ್ಡ ರಂಗೇಗೌಡರು ತಮ್ಮ ದಾಂಪತ್ಯ ಜೀವನ, ಚರ್ಚಾಕೂಟಗಳಲ್ಲಿ ತಮ್ಮೀರ್ವರ ನಡುವೆ ನಡೆಯುತ್ತಿದ್ದ ಸ್ಪರ್ಧೆ, ಮತ್ತು ತಮ್ಮಿಬ್ಬರಲ್ಲಿ ಉಂಟಾದ ಪ್ರೀತಿ, ಸ್ನಾತಕೋತ್ತರ ಪದವಿಯ ಓದು, ವಿವಾಹ ಇತ್ಯಾದಿಗಳ ಬಗ್ಗೆ ವಿವರಿಸುತ್ತಾ ಆಕೆ ಗಟ್ಟಿಗಿತ್ತಿ, ಸಾಧಕಿ ಎಂಬ ತಮ್ಮ ಮನದಾಳದ ವಿಚಾರಗಳನ್ನು ಹಂಚಿಕೊಂಡರು.

ಡಾ.ಆರ್.ಲಕ್ಷ್ಮೀನಾರಾಯಣ ಅವರು ದಿವಂಗತ ಡಾ.ಕೆ.ರಾಜೇಶ್ವರಿ ಗೌಡರು ಅವರ ಬರವಣಿಗೆ ಶಾಶ್ವತವಾಗಿ ಓದುಗ ವಲಯದಲ್ಲಿ ಚಿರಸ್ಥಾಯಿಯಾಗಿರುವುದು ಮತ್ತು ಅವರ ಕಥೆಗಳ ಸಂಖ್ಯೆ ಕಡಿಮೆಯಿದ್ದರೂ ವಸ್ತು ಮತ್ತು ಶೈಲಿಗಳ ದೃಷ್ಟಿಯಿಂದ ಉತ್ತಮ ಕಥೆಗಾರ್ತಿಯ ಸಾಲಿನಲ್ಲಿ ನಿಲ್ಲುತ್ತಾರೆ ಎಂದು ವಿವರಿಸಿದರು. ಇತಿಹಾಸದ ಸಣ್ಣ ಸಂಗತಿಯ ಎಳೆ ಹಿಡಿದು ಅಪೂರ್ವ ಕಲ್ಪಕ ಶಕ್ತಿಯಿಂದ ಮತ್ತು ವ್ಯುತ್ಪತ್ತಿ ಶಕ್ತಿಯಿಂದ ಕಥೆ ಕಟ್ಟುವ ಅವರ ರೀತಿ ವಿಶೇಷವಾದ್ದು ಎಂದರು.

ಈ ಕಾರ್ಯಕ್ರಮದಲ್ಲಿ ದಿವಂಗತ ದಿವಂಗತ ಡಾ. ಕೆ. ರಾಜೇಶ್ವರಿ ಗೌಡರವರ ಕುಟುಂಬ ವರ್ಗದವರು ಭಾಗವಹಿಸಿದ್ದರು.

ಡಾ. ಬಿ.ಸಿ.ರಾಜಕುಮಾರ್‌ರವರು ಕಾರ್ಯಕ್ರಮ ನಿರೂಪಣೆ ಮಾಡಿದರು. ಡಾ.ಹೆಚ್.ಎಸ್. ಪ್ರಕಾಶ್‌ಅವರು ವಂದನಾರ್ಪಣೆ ಸಲ್ಲಿಸಿದರು.



# ಪದಚರಿತೆ

### ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ



– ಡಾ. ಪಿ.ವಿ. ನಾರಾಯಣ

ಮಂದಾಸನ: ಇದು ಸಂಸ್ಕೃತದ 'ಮಂಜೂಷಾ' ಮತ್ತು 'ಆಸನ' ಎಂಬೆರಡು ಶಬ್ದಗಳಿಂದ ಆದ ಹಾಗೆ ತೋರುತ್ತದೆ. ಸಂಸ್ಕೃತದಲ್ಲಿ ಮಂಜೂಷಾ ಎಂದರೆ ಪೆಟ್ಟಿಗೆ: "ಪಿಟಕಃ ಪೇಟಕಃ ಪೇಟಾ ಮಂಜೂಷಾ" ಎಂದು 'ಅಮರಕೋಶ'ದಲ್ಲಿದೆ. "ಪೇಟಿಗೆಯದು ಮಂಜೂಷೆ" ಎಂಬುದು 'ಅಭಿಧಾನ ವಸ್ತುಕೋಶ'ದ ವಿವರಣೆ ['ಪೇಟಿಗೆ ಎಂಬುದು 'ಪೇಟಿಕಾ'ದ ತದ್ಭವ]. 'ಮಂದಸು' ಎಂಬ ಶಬ್ದವನ್ನು 'ಚಾವುಂಡರಾಯಪುರಾಣ' ಪೆಟ್ಟಿಗೆ ಎಂಬರ್ಥದಲ್ಲಿ ಬಳಸಿದೆ: "ಮಂದಸಿನೊಳಿರ್ದ ತಳಾರನ ಸಾಕ್ಷಿ ನುಡಿಯಿಸಿದೊಡಂ". 'ಮಂದಾಸ' ಎಂಬ ರೂಪವು 'ಜೀವಸಂಬೋಧನೆ'ಯಲ್ಲಿದೆ: "ಮೇಗೆ ನೆಗೆದ ಮಂದಾಸಂ ಸಿಡಿಲ್ ಬಡಿಯೆ ಸುಭೌಮಂ ಸತ್ತು". ಕರ್ಣಪಾರ್ಯನ 'ನೇಮಿನಾಥಪುರಾಣ'ದಲ್ಲಿ ಬರುವ "ಕುಮಾರನಂ ಆಗಳೆ ಕೊಂಡು ಬಂದವರ್ ಸೊಗಯಿಸುತಿರ್ಪ ಮಂದಸಿನೊಳಿಕ್ಕಿ" ಎಂಬ ವಾಕ್ಯವನ್ನು ಗಮನಿಸಿದರೆ 'ಮಂದಸು' ಪದಕ್ಕೆ ಪೆಟ್ಟಿಗೆ ಎಂಬರ್ಥ ಮಾಡುವುದಕ್ಕಿಂತ ತೊಟ್ಟಿಲು ಎಂದು ಅರ್ಥೈಸುವುದು ಹೆಚ್ಚು ಸೂಕ್ತವಾಗಿ ಕಾಣುತ್ತದೆ. 'ಮಂದಾಸು' ಎಂಬ ರೂಪವು ಮೂರನೆಯ ಮಂಗರಸನ 'ನೇಮಿಜಿನೇಶಸಂಗತಿ'ಯಲ್ಲಿದೆ: "ಆ ಸುಕುಮಾರನನೊಂದು ಮಂದಾಸಿನೊಳ್ ರಾಸಿ ಮಾಡಿದ ರತ್ನಸಹಿತ ಆ ಸಹಚರಿಯರಿಸಿ". ಇಲ್ಲಿಯೂ 'ಮಂದಾಸು'ವಿಗೆ ಪೆಟ್ಟಿಗೆ ಎಂಬುದಕ್ಕಿಂತ ತೊಟ್ಟಿಲು ಎಂಬರ್ಥ ಹೆಚ್ಚು ಸೂಕ್ತವಾಗಿ ಕಾಣುತ್ತದೆ. ಬಾಹುಬಲಿಯ 'ನಾಗಕುಮಾರಚರಿತೆ' ಎಂಬ ಕಾವ್ಯದಲ್ಲಿ 'ಮಂದಾಸು' ಶಬ್ದವನ್ನು ಪ್ರಾಣಿಗಳನ್ನಿಡುವ ಬೋನು ಎಂಬರ್ಥದಲ್ಲಿ ಬಳಸಲಾಗಿದೆ: "ಘೋಟದರಸು ಅಟ್ಟಿದ ಮಂದಾಸಿನೊಳು ಶಕಟ-ದ ಮೇಲಿಟ್ಟು". ಈಗ ಮಂದಸು ಎಂಬ ಶಬ್ದ ಸ್ವತಂತ್ರವಾಗಿ ಬಳಕೆಯಲ್ಲಿಲ್ಲದಿದ್ದರೂ 'ಮಂದಾಸನ' ಎಂಬುದು ಸರ್ವಸಾಮಾನ್ಯ ಬಳಕೆಯ ಶಬ್ದವಾಗಿದೆ, ಮಂದಾಸನ ಎಂದರೆ ದೇವರ ವಿಗ್ರಹವನ್ನು ಪೂಜೆಗಾಗಿ ಇಡುವ ಪೆಟ್ಟಿಗೆ ಅಥವಾ ಮಂಟಪದಾಕಾರದ ಮರದ ರಚನೆಗೆ ಅನ್ವಯಿಸುತ್ತದೆ. ಹೀಗಾಗಿ, ಪ್ರಾಯಶಃ ಪೆಟ್ಟಿಗೆಯಾಕಾರದ ಎಲ್ಲ ವಸ್ತುಗಳನ್ನೂ ಮಂದಸ ಎಂಬುದರೊಡನೆ ಸಮೀಕರಿಸುವುದು ಕಾಣುತ್ತದೆ. ಮಂಜೂಷಾ>ಮಂದಸ ಆದ ಮೇಲೆ ಕನ್ನಡದಲ್ಲಿ ಈ ತದ್ಭವಕ್ಕೇ 'ಆಸನ' ಎಂಬ ಶಬ್ದವನ್ನು ಸೇರಿಸಿ ಸವರ್ಣಸಂಧಿಯಾಗಿಸಿ 'ಮಂದಾಸನ'ವಾಗಿ ಮಾಡಿಕೊಂಡಿರುವಂತೆ ಕಾಣುತ್ತದೆ. ಆದ್ದರಿಂದ 'ಮಂದಾಸನ' ಎಂಬ ಶಬ್ದಕ್ಕೆ ಮಂದಸ+ಆಸನ=ಮಂದಸಾಸನ>ಮಂದಾಸನ ಎಂಬ ವ್ಯುತ್ಪತ್ತಿಯನ್ನು ಹೇಳಬಹುದೆಂದು ಕಾಣುತ್ತದೆ.

=====

ಮಗು: ಇದೊಂದು ದ್ರಾವಿಡ ಪದ. ಇದರರ್ಥ ಶಿಶು ಎಂದು. ತಮಿಳಿನಲ್ಲಿ ಮಕ, ತುಳುವಿನಲ್ಲಿ ಮಗೆ, ಮಲಯಾಳಂನಲ್ಲಿ ಮಗನ್ ಎಂಬ ರೂಪಗಳಿವೆ. ಸಂತಾನ ಎಂಬರ್ಥದಲ್ಲಿ ಮಗ, ಮಗಳು ಎಂಬ ಶಬ್ದಗಳು ಬಳಕೆಯಲ್ಲಿವೆ. ಮಗು+ಅನ್=ಮಗನ್>ಮಗ ಎಂದೂ ಮಗು+ಅಳ್+ಮಗಳ್ [ಅವನ್, ಅವಳ್ ಎಂಬ ಸರ್ವನಾಮಗಳು ಗಂಡು-ಹೆಣ್ಣು ಎದು ಸೂಚಿಸುವ ಅನ್, ಅಳ್ ಎಂಬ ಪ್ರತ್ಯಯಗಳಾಗಿವೆ] ಎಂದೂ ಆಗಿವೆ. ಮಗ ಎಂಬುದು ಪುಂವಾಚಿಯಾಗಿ [ಗಂಡು ಎಂಬುದನ್ನು ಸೂಚಿಸಲು] ಮಗವಾಡು ಆಲುಮಗ ಮುಂತಾಗಿ ತೆಲುಗಿನಲ್ಲಿ ಬಳಕೆಯಾಗುತ್ತದೆ; ಮಗಡು ಎಂಬುದು ಅಲ್ಲಿ ಗಂಡನನ್ನು ಸೂಚಿಸುತ್ತದೆ. ಕನ್ನಡದಲ್ಲಿ ಮಗು ಎಂಬುದಕ್ಕೆ [ಕ]ಗಳ್ ಎಂಬ ಬಹುವಚನ ಪ್ರತ್ಯಯ ಹತ್ತಿಸಿ ಮಗುಗಳ್>ಮಕ್ಕಳ್ ಎಂಬ ರೂಪವನ್ನು ಮಾಡಿಕೊಳ್ಳುತ್ತೇವೆ.

ಚಿಕ್ಕವರನ್ನು ಅಕ್ಕರೆಯಿಂದ ಕರೆಯುವಾಗ 'ಮಗು' ಎಂದು ಸಂಬೋಧಿಸುವ ರೂಢಿಯಿದೆ. ಮಗು ಪುಂಸ್ತ್ರೀವಾಚಿಯಾದ [ಹೆಣ್ಣು ಗಂಡು ಎರಡಕ್ಕೂ ಅನ್ವಯಿಸುವ] ಪದವಾದುದರಿಂದ ಕನ್ನಡದಲ್ಲಿ ಅದರ ಹಿಂದೆ ಗಂಡು ಹೆಣ್ಣು ಎಂದು ಸೇರಿಸಿ ಗಂಡುಮಗು, ಹೆಣ್ಣು ಮಗು ಎಂದು ಮಾಡಿಕೊಳ್ಳುವ ಪರಿಪಾಟವಿದೆ: ಮಗ, ಮಗಳು ಎಂಬುದು ಸಿದ್ಧವಾದ ಮೇಲೆ ಬಹುವಚನವನ್ನು ಸೂಚಿಸಲು 'ಅಂದಿರು' ಎಂಬ ಪ್ರತ್ಯಯ ಸೇರಿಸಿದಾಗ ಮಗಂದಿರು, ಮಗಳಂದಿರು ಎಂಬ ರೂಪಗಳುಂಟಾಗುತ್ತವೆ. ಕ್ರಿಶ ಹತ್ತನೆಯ ಶತಮಾನದ ಗದ್ಯಕಾವ್ಯ 'ಚಾವುಂಡರಾಯಪುರಾಣ'ದಲ್ಲಿ "ಸಾಗರದತ್ತನುಂ ಸಮುದ್ರದತ್ತನುಂ ಎಂಬ ಮಗಂದಿರುಂ" ಎಂಬ ಹಾಗೂ ಹೆಣ್ಣುಮಕ್ಕಳು ಎಂಬರ್ಥದಲ್ಲಿ 'ಮಗಳ್ದಿರ್' ಎಂಬ ಪ್ರಯೋಗಗಳಿವೆ.

ಸಮಾಸಪದಗಳಲ್ಲೂ ಮಗ ಶಬ್ದವನ್ನು ಬಳಸಿ, ಮದುಮಗ, ಮದುಮಗಳು, ಮದುಮಕ್ಕಳು ಎಂಬ ರೂಪಗಳನ್ನು ಮಾಡಿಕೊಳ್ಳುತ್ತೇವೆ. ಮಕ್ಕಳಾಟ ಎಂಬುದು ಹುಡುಗಾಟವನ್ನು ಸೂಚಿಸುವಂತೆಯೇ ಗಂಭಿರವಾಗಿ ಪರಿಗಣಿಸದುದನ್ನೂ ಧ್ವನಿಸುತ್ತದೆ. ಹೀಗೆಯೇ ಮಕ್ಕಳಾಟಿಕೆ ಎಂಬುದು ಆಟದ ಸಾಮಾನು ಮತ್ತು ಮಕ್ಕಳು ಆಟವಾಡುವುದು ಹಾಗೂ ಗಂಭೀರವಾಗಿ ಪರಿಗಣಿಸದ ಮನೋಭಾವವನ್ನು ಸೂಚಿಸುತ್ತದೆ.

=====

## ಪ್ರಕಟಣೆ

### ಶಾ. ಬಾಲೂರಾವ್ ಯುವಬರಹಗಾರ ಪ್ರಶಸ್ತಿ ಮತ್ತು ಶಾ. ಬಾಲೂರಾವ್ ಅನುವಾದ ಪ್ರಶಸ್ತಿ

ಪ್ರತಿವರ್ಷ ಮೊದಲ ಮುದ್ರಣವಾಗಿ ಪ್ರಕಟಗೊಂಡ ಕೃತಿಗಳಿಗಾಗಿ ಬಿ. ಎಂ. ಶ್ರೀ. ಪ್ರತಿಷ್ಠಾನವು ಕೊಡಮಾಡುವ 'ಶಾ. ಬಾಲೂರಾವ್ ಯುವ ಬರಹಗಾರ ಪ್ರಶಸ್ತಿ'ಗೆ ಶ್ರೀ ಹರೀಶ್ ಹಾಗಲವಾಡಿ ಅವರ 'ಋಷ್ಯ ಶೃಂಗ' ಕೃತಿ ಹಾಗೂ, 'ಶಾ. ಬಾಲೂರಾವ್ ಅನುವಾದ ಪ್ರಶಸ್ತಿ'ಗೆ ಶ್ರೀ ಪದ್ಮರಾಜ ದಂಡಾವತಿ ಅವರ 'ಸೀತಾ' ಅನುವಾದ ಕೃತಿಗಳು ೨೦೨೦ ರಲ್ಲಿ ಮೊದಲ ಮುದ್ರಣವಾಗಿ ಪ್ರಕಟಗೊಂಡವುಗಳಲ್ಲಿ ಶ್ರೇಷ್ಠ ಕೃತಿಗಳೆಂದು ಆಯ್ಕೆಯಾಗಿವೆ. ಪ್ರೊ ಎಮ್ ಎಸ್. ರಘುನಾಥ್ ಮತ್ತು ನಗರಗೆರೆ ರಮೇಶ್ ಅನುವಾದ ಪ್ರಶಸ್ತಿಯ ಅಯ್ಕೆ ಸಮಿತಿಯಲ್ಲಿದ್ದರು. ಡಾ. ಜಿ. ವಿ. ಆನಂದ ಮೂರ್ತಿ ಮತ್ತು ಡಾ. ಅನಂದರಾಮ ಉಪಾಧ್ಯಾಯ ಅವರು ಯುವ ಪುರಸ್ಕಾರದ ಆಯ್ಕೆ ಸಮಿತಿಯಲ್ಲಿದ್ದರು

ಪ್ರತಿ ಪ್ರಶಸ್ತಿಯೂ ರೂ. ೨೫,೦೦೦/- ನಗದು ಹಾಗೂ ಸ್ಮರಣಿಕೆಯನ್ನು ಒಳಗೊಂಡಿರುತ್ತದೆ. ಈ ಪ್ರಶಸ್ತಿ ಪಡೆದ ಇಬ್ಬರಿಗೂ ಹಾರ್ದಿಕ ಅಭಿನಂದನೆಗಳು.

### ಶ್ರೀ ಈರಬಸಪ್ಪಾ ಪರತಬಾದಿ



ಮಹಾರಾಷ್ಟ್ರದಲ್ಲಿ ನಮ್ಮ ಆಜೀವ ಸದಸ್ಯರಾದ ಶ್ರೀ ಈರಬಸಪ್ಪಾ ಪರತಬಾದಿ ಅವರಿಗೆ ಬೆಳಗಾವಿಯ ಕಸ್ತೂರಿ ಸಿರಿಗನ್ನಡ ವೇದಿಕೆ ವತಿಯಿಂದ ಆಗಸ್ಟ್ 2021ರಲ್ಲಿ ರಾಜ್ಯಮಟ್ಟದ ವಿದ್ಯಾವಿಭೂಷಣ ಪ್ರಶಸ್ತಿ ನೀಡಿ ಸನ್ಮಾನಿಸಲಾಯಿತು. ಪರತಬಾದಿಯವರು ಸೋಲಾಪುರ ಜಿಲ್ಲೆಯ ಅಕ್ಕಲಕೋಟ ತಾಲೂಕಿನ ನಾಲವಾರ ಕರಜಗಿ ಸರ್ಕಾರಿ ಕನ್ನಡ ಶಾಲೆಯಲ್ಲಿ ಸಹ ಶಿಕ್ಷಕರಾಗಿ ಸೇವೆಸಲ್ಲಿ ಸುತ್ತಿದ್ದಾರೆ.

# ಬಿಎಂಶ್ರೀ ಪ್ರತಿಷ್ಠಾನ ನಡೆದು ಬಂದ ದಾರಿ-೨

ಬಿ.ಆರ್. ರವೀಂದ್ರನಾಥ

**ಹಿಂದಿನ ಸಂಚಿಕೆಯಿಂದ**

ಈ ಹಿನ್ನಲೆಯಲ್ಲಿ ತಮ್ಮ ಅಚ್ಚುಮೆಚ್ಚಿನ ಗುರುಗಳಾಗಿದ್ದ ಬಿಎಂಶ್ರೀ ಅವರ ಸ್ಮಾರಕವಾಗಿ ಒಂದು ಸಂಸ್ಥೆಯನ್ನು ಸ್ಥಾಪಿಸಲು ಎಂವಿಸೀ ನಿರ್ಧರಿಸಿದರು. ಆದರೆ ಎಂವೀಸೀ ಅವರಿಗೆ ಹಣಬಲವಿರಲಿಲ್ಲ. ಸಂಸ್ಥೆಯನ್ನು ಹುಟ್ಟುಹಾಕಲು ಕಚೇರಿಯೊಂದು ಬೇಕಾಗಿತ್ತು. ಸಂಸ್ಥೆಯ ಸ್ಥಾಪನೆ ಪೂರ್ವದಲ್ಲಿ ನೂರಾರು ಜನರನ್ನು ಸಂಪರ್ಕಿಸಬೇಕಾಗಿತ್ತು. ಎಂವೀಸಿ ಅವರ ದೇಹ ಪ್ರಕೃತಿ ಮತ್ತು ಕಾರ್ಯಬಾಹುಳ್ಯದ ಕಾರಣಗಳಿಂದ ಎಲ್ಲರನ್ನೂ ಖುದ್ದು ಭೇಟಿ ಮಾಡುವುದು ಅಸಾಧ್ಯವಾಗಿದ್ದ ಕಾರಣದಿಂದ ಎಲ್ಲರಿಗೂ ಪತ್ರಗಳನ್ನು ತಾವೆ ಸ್ವತಃ ಬರೆಯಲು ನಿರ್ಧರಿಸಿದರು. ಇದೇ ಸರಿಸುಮಾರು ಸಮಯದಲ್ಲಿ ಅಂದರೆ ೧೯೭೯ ನೇ ಇಸವಿಯ ಏಪ್ರಿಲ್-ಮೇ ತಿಂಗಳುಗಳಲ್ಲಿ ಡಾ। ಬಿ. ಸಿ. ರಾಮಚಂದ್ರ ಶರ್ಮ ಅವರು ಇಂಗ್ಲಂಡ್‌ನಿಂದ ಒಂದು ಪೋರ್ಟಬಲ್ ಟೈಪರೈಟರ್ ತಂದು ಎಂವೀಸೀ ಅವರಿಗೆ ಕೊಡುಗೆಯಾಗಿತ್ತಿದ್ದರು. ಈ ಕೊಡುಗೆಯಿಂದ ಅವರಿಗೆ ಬಹಳಷ್ಟು ಸಹಾಯವಾಯಿತು. ಅದರಲ್ಲಿ ಅವರು ಕಾಗದವನ್ನು ಟೈಪಿಸಿ ಸುಮಾರು ನೂರು ಮಂದಿ ಹಿರಿಯರು ಸಮಕಾಲೀನರು ಕಿರಿಯರು ಹಾಗೂ ಬಿಎಂಶ್ರೀ ಅವರ ಬಂಧುಗಳಿಗೆ ಪತ್ರ ಬರೆದು ತಮ್ಮ ಮನದಿಂಗಿತವನ್ನು ತಿಳಿಸಿದರು. ಜೊತೆಗೆ ಮಾಸ್ತಿ, ಡಿವಿಜಿ, ವಿಸೀ ಮುಂತಾದ ಹಿರಿಯರೊಂದಿಗೆ ಖುದ್ದಾಗಿ ಸಮಾಲೋಚಿಸಿದರು. ಅವರುಗಳು ಇತ್ತ ಪ್ರೋತ್ಸಾಹದ ಫಲವಾಗಿ ಗೋಖಲೆ ಸಾರ್ವಜನಿಕ ಸಂಸ್ಥೆಯ ಆವರಣದಲ್ಲಿ ೧೯೭೯ ರ ಮೇ ೬ ರಂದು ಭಾನುವಾರ ಸಂಜೆ ೪-೦೦ ಗಂಟೆಗೆ ಸ್ಥಾಪಕರ ಔಪಚಾರಿಕ ಸಭೆಯೊಂದನ್ನು ಕರೆಯಲಾಯಿತು. ಅಂದು ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ ಸ್ಥಾಪಿತವಾಯಿತು ಎಂದು ಪರಿಗಣಿಸಲಾಯಿತು. ಪ್ರತಿಷ್ಠಾನದ ನಿಯಮಾವಳಿಗಳಲ್ಲಿ ಉಲ್ಲೇಖಿಸಿರುವ ಆದರ ಮುಖ್ಯ ಉದ್ದೇಶಗಳಿವು: ಕನ್ನಡಕ್ಕೆ ಸಂಬಂಧಿಸಿದಂತೆ ವಿವಿಧ ಜ್ಞಾನಶಾಖೆಗಳಲ್ಲಿ ಸಂಶೋಧನೆಯನ್ನು ಪ್ರೋತ್ಸಾಹಿಸುವುದು; ಹಸ್ತಪ್ರತಿಶಾಸ್ತ್ರ, ಗ್ರಂಥಸಂಪಾದನೆ, ವ್ಯಾಕರಣ, ಶಾಸನಾಧ್ಯಯನ, ನಿಘಂಟುಶಾಸ್ತ್ರ, ಭಾಷಾವಿಜ್ಞಾನ, ಸಾಹಿತ್ಯ ವಿಮರ್ಶೆ ಮುಂತಾದವುಗಳ ಅಧ್ಯಯನದಲ್ಲಿ ತೊಡಗಿಕೊಳ್ಳುವುದು; ಹಸ್ತಪ್ರತಿಗಳ ಸಂಗ್ರಹ ಮತ್ತು ಸಂರಕ್ಷಣೆ; ದತ್ತಿಗಳನ್ನು ಸ್ಥಾಪಿಸುವುದು; ಹಸ್ತಪ್ರತಿಶಾಸ್ತ್ರ-ಗ್ರಂಥಸಂಪಾದನೆ ಮುಂತಾದವುಗಳಲ್ಲಿ ತರಬೇತಿ ನೀಡುವುದು; ಅವುಗಳ ಬಗೆಗಿನ ತಿಳಿವಳಿಕೆಯನ್ನು ಪ್ರಸಾರ ಮಾಡುವುದು; ಪ್ರಶಸ್ತಿಗಳನ್ನು ಸ್ಥಾಪಿಸುವುದು ಮತ್ತು ಗೌರವ ಸದಸ್ಯತ್ವ ಮುಂತಾವನ್ನು ನೀಡುವುದು; ಸಮಾನಾಸಕ್ತ ರಾಷ್ಟ್ರೀಯ ಅಂತಾರಾಷ್ಟ್ರೀಯ ಸಂಘಟನೆಗಳೊಂದಿಗೆ ಕೈಜೋಡಿಸಿ ಕಾರ್ಯ ನಿರ್ವಹಿಸುವುದು; ಗ್ರಂಥಭಂಡಾರದ ಸ್ಥಾಪನೆ; ಮತ್ತು ಮೇಲಿನ ಆಶೋತ್ತರಗಳಿಗೆ ಪೂರಕವಾದ ಕಾರ್ಯಕ್ರಮಗಳನ್ನು ಆಯೋಜಿಸುವುದು. ಅದರ ಸಂಸ್ಥಾಪಕ ಕಾರ್ಯಸಮಿತಿಯ ವಿವರ ಹೀಗಿದೆ :

ಕಾರ್ಯಕಾರಿ ಸಮಿತಿಯ ಸದಸ್ಯರುಗಳ ಹೆಸರು, ವಿಳಾಸಗಳು ಮತ್ತು ವೃತ್ತಿಗಳು:

| ಕ್ರ.ಸಂ | ಹೆಸರು | ವಿಳಾಸ | ವೃತ್ತಿ |
|---|---|---|---|
| ೧ | ಶ್ರೀ ನಿಟ್ಟೂರು ಶ್ರೀನಿವಾಸ ರಾವ್, | ಬಿಎಸ್‌ಸಿ., ಬಿ ಎಲ್<br>೪೯, ಸೌತ್ ಎಂಡ್ ಅಡ್ಡರಸ್ತೆ,<br>ಬಸವನಗುಡಿ, ಬೆಂಗಳೂರು-೪ | ಕರ್ನಾಟಕದ ನಿವೃತ್ತ ಮುಖ್ಯ ನ್ಯಾಯಾಧೀಶರು,<br>ಸಾಮಾಜಿಕ-ಸಾಹಿತ್ಯ ಚಟುವಟಿಕೆಗಳು |
| ೨ | ಶ್ರೀ ಎಂ.ವಿ. ಸೀತಾರಾಮಯ್ಯ, | ಎಂ ಎ. ಕನ್ನಡ ರೀಡರ್ ಮತ್ತು ಯುಜಿಸಿ ಕನ್ನಡ ಪ್ರಾಧ್ಯಾಪಕರು (ನಿವೃತ್ತ),<br>೫೪, ಅರವಿಂದ, ೩ನೇ ಕ್ರಾಸ್, ಗವೀಪುರಂ,<br>ಬೆಂಗಳೂರು-೧೯ | ಪ್ರೊಫೆಸರ್ |
| ೩ | ಶ್ರೀ ಕೆ. ಆರ್. ಗಣೇಶ್, | ಎಂ ಎ., ಬಿ ಎಡ್.<br>೨೦/೧, ೪ನೇ ಕ್ರಾಸ್, ಮಾಗಡಿ ರಸ್ತೆ, ಬೆಂಗಳೂರು | ಉಪನ್ಯಾಸಕರು |
| ೪ | ಶ್ರೀ ಕೆ. ಎಸ್. ಮಧುಸೂಧನ, | ಎಂ.ಎ.<br>ನಂ -೭೯೫( ಮೇಲ್ಮಹಡಿ), ೨ನೇ ಕ್ರಾಸ್,<br>ಬನಶಂಕರಿ ಮೊದಲ ಹಂತ, ಬೆಂಗಳೂರು- ೫೦ | ಉಪನ್ಯಾಸಕರು |
| ೫ | ಪ್ರೊ. ಗರ್ಗೇಶ್ವರಿ ವೆಂಕಟಸುಬ್ಬಯ್ಯ | ಎಂ.ಎ., ಬಿ.ಟಿ.,<br>ಆಕ್ಷುಯರಿ, ನಂ.೨೦, ರಾಜಾಮಹಲ್ ಬಡಾವಣೆ,<br>೨ನೇ ಕ್ರಾಸ್, ೯ನೇ ಮುಖ್ಯ ರಸ್ತೆ, ಬೆಂಗಳೂರು-೬ | ಪ್ರೊಫೆಸರ್ |
| ೬ | ಪ್ರೊ. ಜಿ. ವೆಂಕಟಸುಬ್ಬಯ್ಯ, | ಎಂ.ಎ., ಬಿ.ಟಿ.<br>೫೮, ೩೧ ನೇ ಕ್ರಾಸ್, ೭ ನೇ ಬ್ಲಾಕ್, ಜಯನಗರ, ಬೆಂಗಳೂರು | ಪ್ರೊಫೆಸರ್ |
| ೭ | ಪ್ರೊ. ಎಂ.ಎಂ.ಕಲಬುರ್ಗಿ. | ಎಂ.ಎ., ಪಿ.ಹೆಚ್.ಡಿ<br>ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ | ಪ್ರೊಫೆಸರ್ |
| ೮ | ಡಾ. ಎಂ. ಕೃಷ್ಣ ರಾವ್. | ಎಂ.ಎ., ಡಿ.ಲಿಟ್. ಉಸ್ಮಾನಿಯ ವಿಶ್ವವಿದ್ಯಾಲಯ, ಹೈದರಾಬಾದು | ಪ್ರೊಫೆಸರ್ |
| ೯ | ಡಾ. ಕೆ.ಕುಶಾಲಪ್ಪ ಗೌಡ. | ಎಂ.ಎ., ಪಿ.ಹೆಚ್.ಡಿ. ಮದರಾಸುವಿಶ್ವವಿದ್ಯಾಲಯ,<br>ಮದರಾಸು | ಪ್ರೊಫೆಸರ್ |
| ೧೦ | ಡಾ. ಗೊರೂರು ರಾಮಸ್ವಾಮಿ ಅಯ್ಯಂಗಾರ್, | ಡಿ. ಲಿಟ್. ಗೊರೂರು, ಹಾಸನ ಜಿಲ್ಲೆ | ಸಾಹಿತಿ |
| ೧೧ | ಶ್ರೀ ಡಿ.ವಿ.ಕೆ ಮೂರ್ತಿ, | ಬಿಎಸ್‌ಸಿ (ಆನರ್ಸ್)ಪ್ರಕಾಶಕರು, ಕೃಷ್ಣಮೂರ್ತಿಪುರಂ, ಮೈಸೂರು | ಪ್ರಕಾಶಕರು |
| ೧೨ | ಶ್ರೀಮತಿ. (ಪ್ರೊ) ಸಿ. ಎನ್.ಮಂಗಳ, | ಎಂ.ಎ. ಪ್ರಾಂಶುಪಾಲರು, ಆರ್. ವಿ.ಮಹಿಳಾ ಕಾಲೇಜು,<br>ಬೆಂಗಳೂರು | ಪ್ರೊಫೆಸರ್ |
| ೧೩ | ಡಾ. ಎಂ.ಚಿದಾನಂದ ಮೂರ್ತಿ. | ಎಂ.ಎ. ಪಿ.ಹೆಚ್.ಡಿ ಬೆಂಗಳೂರು ವಿಶ್ವವಿದ್ಯಾಲಯ ಆವರಣ,<br>ಬೆಂಗಳೂರು | ಪ್ರೊಫೆಸರ್ |

ನಿಟ್ಟೂರು ಶ್ರೀನಿವಾಸ ರಾಯರು ಅದರ ಗೌರವ ಅಧ್ಯಕ್ಷರಾದರು. ಎಂವಿಸೀ ಸಂಸ್ಥಾಪಕ ಕಾರ್ಯದರ್ಶಿಯಾಗಿ ಅದರ ಕಾರ್ಯ ಚಟುವಟಿಕೆಗಳನ್ನು ತಮ್ಮ ಮನೆಯಿಂದಲೇ ಮಾಡತೊಡಗಿದರು.

(ಮುಂದುವರಿಯುವುದು)




# ಪತ್ರಿಕಾ ನೆನಪು






ಪ್ರವೆ 12|9|

ಸಾವಿತ್ರಮ್ಮ - ಪ್ರೊ.ಎಂ.ವಿ.
ಸೀತಾರಾಮಯ್ಯ ಸಾಹಿತ್ಯ ಪುರಸ್ಕಾರ:
ಪ್ರಶಸ್ತಿ ಪುರಸ್ಕೃತರು–ಲೇಖಕ ಪ್ರೊ.
ಶಿವರಾಮಯ್ಯ,
ಪ್ರಶಸ್ತಿ ಪ್ರದಾನ–
ಚಿಂತಕ ಎಸ್.
ಜಿ.ಸಿದ್ದರಾಮಯ್ಯ,
ಭಾಗವಹಿಸುವವರು–
ಲೇಖಕ ಕೆ.ವೈ.
ನಾರಾಯಣಸ್ವಾಮಿ,
ನಾಡೋಜ ಪ್ರೊ.
ಎಂ.ಎಚ್.ಕೃಷ್ಣಯ್ಯ, ಅಧ್ಯಕ್ಷತೆ–ಬಿ.ಎಂ.
ಶ್ರೀ ಪ್ರತಿಷ್ಠಾನದ ಅಧ್ಯಕ್ಷ ಆರ್.
ಲಕ್ಷ್ಮೀನಾರಾಯಣ. ಆಯೋಜನೆ–ಬಿ.ಎಂ.
ಶ್ರೀ. ಪ್ರತಿಷ್ಠಾನ ಮತ್ತು ಎಂ.ವಿ.ಸೀ.
ಸ್ನಾತಕೋತ್ತರ ಸಂಶೋಧನ ಕೇಂದ್ರ.

ಸಿದ್ಧರಾಮಯ್ಯ



'ಕನ್ನಡಕ್ಕೆ ಎಂ.ಆರ್.ಶ್ರೀನಿವಾಸ
ಮೂರ್ತಿಯವರ ಕೊಡುಗೆ' ವಿಷಯದ
ಕುರಿತ ಉಪನ್ಯಾಸ: ಉಪನ್ಯಾಸ
ನೀಡುವವರು– ವಿಜಯ ಪದವಿಪೂರ್ವ
ಕಾಲೇಜಿನ ಪ್ರಾಧ್ಯಾಪಕ ಎಸ್.ಎಲ್.
ಶ್ರೀನಿವಾಸಮೂರ್ತಿ, ಆಯೋಜನೆ–ಬಿ.
ಶ್ರೀ ಪ್ರತಿಷ್ಠಾನ, ಎಂ.ವಿ.ಸೀ.ಸ್ನಾತಕೋತ್ತ
ಸಂಶೋಧನ ಕೇಂದ್ರ, ಆನ್‌ಲೈನ್
ಕಾರ್ಯಕ್ರಮ–ಸಂಜೆ 4.30.

## ಕರ್ನಾಟಕ ಸರ್ಕಾರಕ್ಕೆ ಮನವಿ

''ಕನ್ನಡ ಕಣ್ವ', 'ಆಚಾರ್ಯ', 'ಕರ್ನಾಟಕ ಏಕೀಕರಣದ ರೂವಾರಿ ಮುಂತಾದ ಬಿರುದುಗಳಿಂದ ಅಲಂಕೃತರಾದ ಶ್ರೀ ಬಿ.ಎಂ.ಶ್ರೀಕಂಠಯ್ಯನವರಿಗೆ ಅವರ ಶಿಷ್ಯನಾದ ಶ್ರೀ ಎಂ.ವೀ. ಸೀತಾರಾಮಯ್ಯನವರ ಮಗನಿಂದ ಭಕ್ತಿ ಪೂರಕ ಪುಷ್ಪಾಂಜಲಿ.

ಬಿ.ಎಂ.ಶ್ರೀ. ಅವರು ಇಂಗ್ಲೀಷ್ ಪ್ರಾಧ್ಯಪಕರಾಗಿದ್ದರೂ ಅವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪ್ರಪ್ರಥಮವಾಗಿ ಕನ್ನಡದಲ್ಲಿ ಎಂ.ಎ. ತರಗತಿಯನ್ನು ಪ್ರಾರಂಭಿಸಿದರು. ಅವರು ಸೋಮವಾರದಿಂದ ಶುಕ್ರವಾರದವರೆಗೆ ಬೆಂಗಳೂರಿನಲ್ಲಿ ಇಂಗ್ಲೀಷ್ ಎಂ.ಎ. ವಿದ್ಯಾರ್ಥಿಗಳಿಗೆ ಪಾಠ ಮಾಡಿ ಶನಿವಾರ ಮತ್ತು ಭಾನುವಾರ ಬೆಳಗ್ಗೆಯಿಂದ ಸಂಜೆಯವರೆಗೆ ಕನ್ನಡ ಎಂ.ಎ. ವಿದ್ಯಾರ್ಥಿಗಳಿಗೆ ಪಾಠ ಮಾಡುತ್ತಿದ್ದರು. ಇದಕ್ಕಾಗಿ ವೇತನವಾಗಲಿ ಪ್ರಯಾಣ ಭತ್ಯೆಯನ್ನಾಗಲಿ ತೆಗೆದುಕೊಳ್ಳುತ್ತಿರಲಿಲ್ಲಾ. ಇಂತಹ ಆದರ್ಶ ಪ್ರಾಧ್ಯಾಪಕರನ್ನು ನಾವುಗಳು ಊಹಿಸಲೂ ಸಾಧ್ಯವಿಲ್ಲ.

ಬಿ.ಎಂ.ಶ್ರೀ. ಅವರು ಕನ್ನಡ ಹಾಗೂ ಇಂಗ್ಲೀಷ್ ಎಂ.ಎ. ವಿದ್ಯಾರ್ಥಿಗಳಿಗೆ ಬೋಧನೆ ಮಾಡುವುದರ ಜೊತೆಗೆ ಕನ್ನಡ ಭಾಷೆಗೆ ಹಾಗೂ ಸಾಹಿತ್ಯಕ್ಕೆ ಅಪಾರವಾದ ಕೊಡುಗೆ ನೀಡಿದ್ದಾರೆ. ಇದರ ಜೊತೆಗೆ ಕರ್ನಾಟಕ ಏಕೀಕರಣಕ್ಕೆ ಇಡೀ ಕರ್ನಾಟಕವನ್ನು ಸುತ್ತಿ ಕನ್ನಡಿಗರನ್ನು ಸಕ್ರಿಯವಾಗಿ ಭಾಗವಹಿಸುವಂತೆ ಉತ್ತೇಜನ ಕೊಟ್ಟಿದ್ದಾರೆ. ಇಂತಹ ಮಹಾಪುರುಷರಿಗೆ ನಮ್ಮ ಕರ್ನಾಟಕ ರಾಜಧಾನಿಯಲ್ಲಿ ಇರುವ ಸ್ಮಾರಕಗಳೆಂದರೆ ನ್ಯಾಷನಲ್ ಕಾಲೇಜಿನ ವೃತ್ತದಲ್ಲಿ ಒಂದು ಕಪ್ಪುಕಲ್ಲಿನ ಪ್ರತಿಮೆ ಮತ್ತು ಇಂದಿರಾನಗರದಲ್ಲಿ ಅವರ ಹೆಸರಿನ ವೃತ್ತ ಮಾತ್ರ. ಇವರ ಹೆಸರಿನಲ್ಲಿ ನಮ್ಮ ಸರಕಾರದ ವತಿಯಿಂದ ಯಾವುದೇ ಸ್ಮಾರಕವಾಗಲೀ ಅಧ್ಯಯನ ಪೀಠವನ್ನಾಗಲೀ ಇಲ್ಲಿಯವರೆಗೆ ಸ್ಥಾಪನೆ ಮಾಡದಿರುವುದು ಅತ್ಯಂತ ವಿಷಾದವಾದ ಸಂಗತಿ.

ಈ ವಿಚಾರದಿಂದ ಬಹಳವಾಗಿ ಮನನೊಂದು ಅವರ ಪ್ರೀತಿಯ ಶಿಷ್ಯರಾದ ನನ್ನ ತಂದೆ ಎಂ.ವೀ.ಸೀ. ಅವರು ತಮ್ಮ ಇಳಿವಯಸ್ಸಿನಲ್ಲಿ (ಸುಮಾರು ೭೦ ವರ್ಷ) ಅನಾರೋಗ್ಯದಿಂದ ನರಳುತ್ತಿದ್ದರು. ದೃಢಸಂಕಲ್ಪದಿಂದ ಬಿ.ಎಂ.ಶ್ರೀ. ಅವರ ನೆನಪಾಗಿ ಒಂದು ಪ್ರತಿಷ್ಠಾನವನ್ನು ಅವರ ಮನೆಯಲ್ಲೇ ಪ್ರಾರಂಭಿಸಿದರು. ಪ್ರಾರಂಭದಲ್ಲಿ ಅವರಿಗೆ ಅವರ ಆಪ್ತರೂ ಹಾಗೂ ಶಿಷ್ಯರೂ ಪ್ರತಿಷ್ಠಾನಕ್ಕೆ ತನು,ಮನ ಹಾಗೂ ಧನವನ್ನು ಕೊಟ್ಟರು. ಇದಾದನಂತರ ಕೆಲವು ವರ್ಷ ಮಾಸ್ತಿಯವರ ಮನೆಯಲ್ಲಿ ನಂತರ ಗೋಖಲೇ ಸಾರ್ವಜನಿಕ ಸಂಸ್ಥೆಯಲ್ಲಿ ಪ್ರತಿಷ್ಠಾನದ ಕೆಲಸ ಕಾರ್ಯಗಳು ನಡೆದವು.

ಶ್ರೀ ರಾಮಕೃಷ್ಣ ಹೆಗ್ಗಡೆಯವರು ಮುಖ್ಯಮಂತ್ರಿ ಆಗಿದ್ದಾಗ, ಶ್ರೀ ನಿಟ್ಟೂರು ಶ್ರೀನಿವಾಸರಾವ್, ಜಿ. ನಾರಾಯಣ ಮತ್ತು ಕೆಲವು ಸಾಹಿತಿಗಳ ಸಹಾಯದಿಂದ ಪ್ರತಿಷ್ಠಾನಕ್ಕೆ ನರಸಿಂಹರಾಜ ಕಾಲೋನಿಯಲ್ಲಿ ಒಂದು ಖಾಲಿ ನಿವೇಶನ ಪ್ರತಿಷ್ಠಾನಕ್ಕೆ ಮಂಜೂರಾಯಿತು. ಈ ನಿವೇಶನ ಎರಡು ಮುಖ್ಯರಸ್ತೆಗಳನ್ನು ಸೇರಿಸುವ ಹಾಗೂ ಎತ್ತರ ತಗ್ಗು ಇದ್ದ ಜಾಗವಾಗಿತ್ತು. ಅಲ್ಲಿ ಕೆ.ಇ.ಬಿ. ಅವರ ಒಂದು ದೊಡ್ಡ ಟ್ರಾನ್ಸ್ಫಾರ್ಮರ್ ಕೂಡಾ ಇತ್ತು. ಈ ಟ್ರಾನ್ಸ್ಫಾರ್ಮ?ರನ್ನು ಬೇರೆ ಜಾಗಕ್ಕೆ ಸ್ಥಳಾಂತರ ಮಾಡಲು ಕೆ.ಇ.ಬಿ. ಯವರು ರೂ. ೫,೦೦೦/- ಸಲ್ಲಿಸಬೇಕೆಂದು ಹೇಳಿದಾಗ ಎಂ.ವಿ.ಸೀ. ಅವರಿಗೆ ದಿಗ್ಭ್ರಮೆ ಆಯಿತು. ಆದರೆ ದೇವರ ದಯೆಯಿಂದ ಆಗಿನ ಕೆ.ಇ.ಬಿ. ಚೇರ್‌ಮನ್ ಶ್ರೀ ವಿಶ್ವೇಶ್ವರಯ್ಯನವರು ಎಂ.ವಿ.ಸೀ. ಅವರ ಶಿಷ್ಯರಾಗಿದ್ದುದರಿಂದ ಆ ಕೆಲಸವನ್ನು ಪುಕ್ಕಟ್ಟೆಯಾಗಿ ಮಾಡುವಂತೆ ನಿರ್ದೇಶನ ಮಾಡಿದರು. ಮುಂದೆ ಮಂತ್ರಿಗಳು, ಎಂ.ಎಲ್.ಎ.ಗಳು, ಎಂ.ಪಿ.ಗಳು ಹಾಗೂ ಸಾರ್ವಜನಿಕರಿಂದ ದೇಣಿಗೆ ಸಂಗ್ರಹಿಸಿ ಹಂತ ಹಂತವಾಗಿ ಈಗಿರುವ ಮೂರು ಅಂತಸ್ತಿನ ಕಟ್ಟಡವನ್ನು ಕಟ್ಟಲಾಯಿತು. ಈಗ ಪ್ರತಿಷ್ಠಾನದ ಎಲ್ಲಾ ಕಾರ್ಯಕ್ರಮಗಳು ಅದರ ಸಭಾಂಗಣದಲ್ಲೇ ನಡೆಯುತ್ತಿವೆ. ಅಲ್ಲದೇ ಬೇರೆ ಬೇರೆ ಸಂಘ ಸಂಸ್ಥೆಗಳಿಗೆ ರಿಯಾಯಿತಿ ದರದಲ್ಲಿ ಕಾರ್ಯಕ್ರಮ ಮಾಡಲು ಅವಕಾಶವನ್ನು ಕಲ್ಪಿಸಿದೆ. ಬಿ.ಎಂ.ಶ್ರೀ ಪ್ರತಿಷ್ಠಾನ ಸುಸಜ್ಜಿತವಾದ ಲೈಬ್ರರಿ, ಸಭಾಂಗಣ ತರಗತಿಗಳು, ಹಸ್ತಪ್ರತಿ ಭಂಡಾರವನ್ನು ಹೊಂದಿದೆ. ಪ್ರತಿಷ್ಠಾನದ ಮುಖ್ಯ ಕಾರ್ಯಕ್ರಮಗಳೆಂದರೆ ಸುಮಾರು ೫೦ ದತ್ತಿ ಉಪನ್ಯಾಸಗಳು ಹತ್ತು ಪುರಸ್ಕಾರಗಳು, ಹಳಗನ್ನಡ ತರಗತಿಗಳು ಮತ್ತು ಪಿಎಚ್.ಡಿ. ವಿದ್ಯಾರ್ಥಿಗಳಿಗೆ ಸಂಶೋಧನೆ ಮಾಡಲು ಪರಿಣಿತರ ಸಹಾಯ ಮುಖ್ಯವಾದುದು. ಇವುಗಳ ಜೊತೆಗೆ ಸೆಮಿನಾರ್‌ಗಳು, ಕಾರ್ಯಾಗಾರಗಳು, ವಿಶೇಷ ಉಪನ್ಯಾಸಗಳನ್ನು ಆಯೋಜನೆ ಮಾಡಲಾಗುತ್ತಿದೆ. ಇಡೀ ಕರ್ನಾಟಕದಲ್ಲೇ ಒಂದು ಅತ್ಯುತ್ತಮ ಸಂಶೋಧನಾ ಸಂಸ್ಥೆ ಎಂದು ಹೆಸರನ್ನು ಗಳಿಸಿದೆ.ಈಗಲಾದರೂ ಕರ್ನಾಟಕ ಸರಕಾರ ಬಿ.ಎಂ.ಶ್ರೀ. ಅವರ ನೆನಪಿನಲ್ಲಿ ಕರ್ನಾಟಕದ ವಿಶ್ವವಿದ್ಯಾನಿಲಯಗಳಲ್ಲಿ ಅವರ ಹೆಸರಿನಲ್ಲಿ ಒಂದು ಅಧ್ಯಯನ ಪೀಠ ಸ್ಥಾಪಿಸುವುದು ಆದ್ಯ ಕರ್ತವ್ಯವಾಗಿದೆ ಎಂದು ಹೇಳಿದರೆ ತಪ್ಪಾಗಲಾರದು. ಇದು ಆದಷ್ಟು ಬೇಗ ಕಾರ್ಯಗತವಾಗಲೆಂದು ಆಶಿಸುತ್ತೇನೆ.

ಬಿಎಸ್ ರಾಮಪ್ರಸಾದ್
ಎಂವೀಸೀ ಅವರ ಪುತ್ರ ಹಾಗೂ ಬಿಎಂಶ್ರೀ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿ ಸದಸ್ಯ



# ಎಂ.ವಿ.ಸಿ.
# ಬದುಕು ಬರಹ – ೧೮

– ಡಾ. ಪಿ.ವಿ. ನಾರಾಯಣ

ಹಿಂದಿನಸಂಚಿಕೆಯಿಂದ

ವಿವೇಕಾನಂದರ ಚಿರಪರಿಚಿತ ಭಂಗಿಯನ್ನರಿಯದವರಾರೂ ಇಲ್ಲ: ಕಾವಿಯನ್ನು ಧರಿಸಿದ ಈ ವೀರಸನ್ಯಾಸಿ ತನ್ನ ಕಾಲದಿಂದ ಇಂದಿನವರೆಗೂ ಯುವಕರಿಗೆ ಸ್ಫೂರ್ತಿದಾಯಕ ವ್ಯಕ್ತಿ. ಎಲ್ಲರ ಪರಿಚಯದ ನಿಲವನ್ನು ಸರಳ ಮಾತುಗಳಲ್ಲಿ ಹೇಳುತ್ತಲೇ ವಿವೇಕಾನಂದರ ಚೈತನ್ಯಶರಧಿಯನ್ನು ಬಣ್ಣಿಸುವ ರೀತಿಯನ್ನು ನೋಡಿ:

ಓ ವಿವೇಕಾನಂದ ಪುರುಷಸಿಂಹ ನರೇಂದ್ರ
ನಿನ್ನ ನೂರನೆ ಹುಟ್ಟು ಹಬ್ಬದಿಂದಿನ ದಿನದಿ
ನಿನ್ನ ಎಚ್ಚರನುಡಿಯ ನೂರು ನೆನಪುಗಳೊಗೆದು
ನಿನ್ನ ತೇಜೋಮೂರ್ತಿಯನು ತಹವು ಕಣ್ಣೆದುರು:
ಆ ವಿಶಾಲ ಲಲಾಟ, ಆ ತೀಕ್ಷ್ಣ ಕಣ್ನೋಟ
ಬಿಗಿದ ತುಟಿ, ಬಿಗಿದ ತಲೆಯ ರುಮಾಲು, ಬಿಗಿಹುಬ್ಬು;
ಬಿಗಿದ ಕೈಕಟ್ಟು, ಕಾವಿಯ ಅಂಗಿ, ನಡುಕಟ್ಟು –
ಬಿಗುವಿನಲ್ಲಿ ಹುಗಿದಿಟ್ಟ ಚೇತನದ ಕಡಲೊಡಲು

ಈ ಕವನದಲ್ಲಿ 'ಬಿಗಿ' ಎಂಬ ಶಬ್ದವನ್ನು ಅದೆಷ್ಟು ಪರಿಯ ಅರ್ಥವಂತಿಕೆಯಿಂದ ಬಳಸಿದ್ದಾರೆ ಕವಿ! ಮತ್ತೊಂದು ವಿಶೇಷವೆಂದರೆ ಎಂವಿಸೀ ಕೈಲಾಸಂ, ಎಂಆರ್‌ಶ್ರೀ, ಮಾಸ್ತಿ, ವಿಸೀ, ಕುವೆಂಪು, ತೀನಂಶ್ರೀ, ಪುತಿನ, ವಿವೇಕಾನಂದ, ಲಾಲ್ ಬಹದ್ದೂರ್ ಶಾಸ್ತ್ರೀ ಮುಂತಾದವರ ಬಗೆಗಿನ ರಚನೆಗಳು ಸಾನೆಟ್ ರೂಪದಲ್ಲಿವೆ. ಕನ್ನಡದ ಬಹುತೇಕ ಹಿರಿಯ ಕವಿಗಳು ಕೈಯಾಡಿಸಿರುವ ಈ ರೂಪ ಎಂವಿಸೀ ಅವರನ್ನೂ ಆಕರ್ಷಿಸಿದುದರಲ್ಲಿ ಅಚ್ಚರಿಯೇನಿಲ್ಲ. ಪ್ರಾಯಶಃ ವ್ಯಕ್ತಿಚಿತ್ರಕ್ಕೇ ಆ ಪದ್ಯರೂಪಹೆಚ್ಚು ಬಳಕೆಯಾಗಿರುವುದು. ಎಂವಿಸೀ ಹಲವರ ವ್ಯಕ್ತಿಚಿತ್ರಣಕ್ಕಲ್ಲದೆ, ಹಲವಾರು ಪ್ರಕೃತಿಚಿತ್ರಗಳಲ್ಲೂ ಈ ರೂಪವನ್ನು ಬಳಸುತ್ತಾರೆ. ವಿಸೀ ಅವರ ಬಗ್ಗೆ ಎಂವಿಸೀ ರಚಿಸಿರುವ ಸಾನೆಟ್, ಚೆನ್ನವೀರ ಕಣವಿಯವರ ಪ್ರಕಾರ, "ಅತ್ಯಂತ ಯಶಸ್ವಿಯಾದ ರಚನೆ. ಬಹಿರಂಗ–ಅಂತಂಗ ವ್ಯಕ್ತಿತ್ವಗಳೆರಡೂ ಇಲ್ಲಿ ಪರಸ್ಪರ ಸ್ಫುರಣಗೊಂಡು ಪಾಕವಾದ ರೀತಿ ಚೇತೋಹಾರಿಯಾಗಿದೆ." ಹೀಗಾಗಿ ಆ ಪದ್ಯವನ್ನಿಲ್ಲಿ ಇಡಿಯಾಗಿ ಉದ್ಧೃತಗೊಳಿಸಬಹುದು:

ಸೆಳೆಗೊಂಬು, ಎಳೆಬಳ್ಳಿ, ನಿನ್ನೊಡಲು: ಕಲೆ ಕಡಲು–
ತುಂಬಿ, ಅಲೆಯಲೆ–ಲಯದ ಲಲಿತ ವಿನ್ಯಾಸದಲಿ
ನಡೆನುಡಿಯ ಚಿಗುರಾಗಿ, ಹೂತು ಮೃದುಹಾಸದಲಿ,
ಕೆಳೆಯ ಕಂಪನು ಬೀರಿ, ತಾಯ್ಗೆ ಕಾಣಿಕೆಗೊಡಲು
ಫಲಿಸಿವೆ 'ದ್ರಾಕ್ಷಿದಾಳಿಂಬೆ'ಗಳು; ಸಮ 'ನೆಳಲು–
ಬೆಳಕು'; ಮೂಡಣ ಪಡುವ ದಿಕ್ಕುದಿಕ್ಕಿನ ಗಾಳಿ–
ಸೇವನೆಯ ಭಾವನೆಯ ಬಿತ್ತರದ ಬಾಳ್ ಬಾಳಿ
ನೆಲ ಬಿಡದೆ ಬಾನ್ ಮುಟ್ಟಿ ಸಿದ್ಧ ಸರ್ವೆವ ಕೊಳಲು.
ನೋವಿನಲಿ ನಲವ, ವಿರಸದಲಿ ಸರಸವನರಸಿ
ಪರಿಣಮಿಸಿ ಹೃದಯದೊಳ್ ಸ್ನಿಗ್ಧತೆಯೆ ತುಂಬಿರಲು
ಅರಿವು–ಕಿಡಿ ಸೋಂಕೆ ಬೆಳಗಿವೆ ನುಡಿಯ 'ದೀಪಗಳು';
ಭಾವಭೃಂಗಶ್ರುತಿಗೆ ಬಾಳ ತಾಳವನಿರಿಸಿ
ರಸಿಕಜೀವನ ತರಂಗಿಸಿ ರಾಗವಾಗಿರಲು
ಹೊಸಹುಟ್ಟಿನಲಿ ಚಿಲುಮೆಚಿಮ್ಮಿದುವು 'ಗೀತಗಳು'

ವಿಸೀ ಅವರ ಪ್ರಮುಖ ಕವನಸಂಕಲನಗಳ ಹೆಸರನ್ನಿರಿಸಿಕೊಂಡೇ ಅವರ ಅಂತರಂಗದ ಸ್ವಭಾವವವನ್ನು ಕಟ್ಟಿಕೊಡುವ ಪ್ರಯತ್ನ ಸುಂದರವಾಗಿದೆ. ಹೀಗೆ ಎಂವಿಸೀ ಅವರ ವ್ಯಕ್ತಿಗೀತೆಗಳು ಸರಳವಾಗಿ, ಆದರೆ ಗೌರವಪೂರ್ಣ ಆತ್ಮೀಯತೆಯಿಂದ ತಮ್ಮ ಮೆಚ್ಚಿನ ನಾಯಕರನ್ನು ಹಾಡಿ ಹೊಗಳುತ್ತವೆ. ಚೆನ್ನವೀರ ಕಣವಿ: 'ರಾಘವ ಅವರ ಸುನೀತಗಳು' ; 'ಆಸ್ವಾದ' : ಪುಟ ೧೩೯

(ಮುಂದುವರಿಯುವುದು)

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2021-2023
dt. 28-12-2020
Office of Posting: Bangalore PSO, Bangalore 560026
Price : Annual Subscription Rs. 20/-
Date of publishing and Posting : 30-09-2021

## ಹಸ್ತ ಪ್ರತಿ ಮತ್ತು ಗ್ರಂಥಾಲಯ ವಿಭಾಗ

ಶ್ರೀ ಸತ್ಯಸಾಯಿ ಯೂನಿವರ್ಸಿಟಿ ಫಾರ್ ಹ್ಯೂಮೆನ್ ಎಕ್ಸೆಲನ್ಸ್‌ನಲ್ಲಿ ಎಂ.ಎ. ಕನ್ನಡ ದ್ವಿತೀಯ ಸೆಮಿಸ್ಟರ್‌ನಲ್ಲಿ ಅಧ್ಯಯನ ಮಾಡುತ್ತಿರುವ ಇಬ್ಬರು ವಿದ್ಯಾರ್ಥಿಗಳು ತಮ್ಮ ವಿಭಾಗದ ಪ್ರಾಧ್ಯಾಪಕರಿಗೆ ಹಸ್ತಪ್ರತಿ ಶಾಸ್ತ್ರ ಅಧ್ಯಯನದ ಕ್ಷೇತ್ರಕಾರ್ಯ ನಿಮಿತ್ತ ಪ್ರತಿಷ್ಠಾನದ ಹಸ್ತಪ್ರತಿ ಸಂಗ್ರಹಾಲಯಕ್ಕೆ ದಿನಾಂಕ ಸೆಪ್ಟೆಂಬರ್ ೪, ೨೦೨೧ರಂದು ಭೇಟಿ ನೀಡಿದರು. ಅವರಿಗೆ ಹಸ್ತ ಪ್ರತಿಗಳ ಸಂರಕ್ಷಣಾ ವಿಧಾನಗಳ ಪ್ರಾತ್ಯಕ್ಷಿಕೆಯನ್ನು ಪ್ರದರ್ಶಿಸಿ, ಪ್ರಾಚೀನ ಲೇಖನ ಸಾಮಗ್ರಿಗಳು, ಹಸ್ತಪ್ರತಿಗಳ ಸ್ವರೂಪ, ಬರವಣಿಗೆಯ ಪರಿಕರಗಳು, ಲಿಪಿಕಾರರ ಸಾಂಸ್ಕೃತಿಕ ನೆಲೆಗಳು, ಮುಂತಾದ ವಿಷಯಗಳ ಬಗ್ಗೆ ಹಸ್ತಪ್ರತಿ ಸಂಯೋಜಕರಾದ ಶ್ರೀ ಬಿ.ಎಸ್. ಗುರುಪ್ರಸಾದ್ ಅವರು ಪರಿಚಯ ಮಾಡಿಕೊಟ್ಟರು ಕ್ಷೇತ್ರಕಾರ್ಯದ ಅಧ್ಯಯನದಲ್ಲಿ ಡಾ. ಮಂಜುನಾಥ್ ಸಹ ಪ್ರಾಧ್ಯಾಪಕರು, ಡಾ. ಹೇಮಂತ್ ಕುಮಾರ್ ಸಹಾಯಕ ಪ್ರಾಧ್ಯಾಪಕರು ಮತ್ತು ಸ್ನಾತಕೋತ್ತರ ವಿದ್ಯಾರ್ಥಿಗಳಾದ ಶ್ರೀ ನವೀನ್ ಕುಮಾರ್ ಮತ್ತು ಶ್ರೀ ಮಲ್ಲಿನಾಥ ಪಾಲ್ಗೊಂಡಿದ್ದರು.

**Printed and published by** : B.R.Ravindranath on behalf of the BMSRI SMARAKA PRATISHTANA, B.M.Sri Pratishtana Road, (3rd Main Road) NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10 . and published at BMSRI SMARAKA PRATISHTANA, B.M.Sri Pratishtana Road, 3rd Main Road, NR Colony, Bangalore - 560019 Editor : **B.R.Ravindranath**

**ಅಚ್ಚಾದ ಪುಸ್ತಕ**

ಶ್ರೀಮತಿ/ಶ್ರೀ.........................................................................

.........................................................................

.........................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭